ಉಷಾ ಸಾಹಿತ್ಯ ಮಾಲೆ—೧೦

# ತತ್ತ್ವಜೀವಿ

ಎಸ್ ನಾಗರಪ್ಪ

ಉಷಾ ಸಾಹಿತ್ಯ ಮಾಲೆ
ಮೈಸೂರು

ಸಂಪಾದಕರು
ರಾ. ವೆಂ. ಶ್ರೀನಿವಾಸ
ಉಷಾ ಸಾಹಿತ್ಯ ಮಾಲೆ, ಮೈಸೂರು

CHECKED 1956

ಮೊದಲ ಮುದ್ರಣ: ಏಪ್ರಿಲ್ ೧೯೪೪

ಬೆಲೆ: ರೂ. ೧-೧೨-೦

ಮುದ್ರಕರು ಮತ್ತು ಪ್ರಕಾಶಕರು
ಆರ್. ಎನ್. ಹಬ್ಬು
ಉಷಾ ಪ್ರೆಸ್, ನೀಲಗಿರಿ ರೋಡ್
ಮೈಸೂರು

# ಬಿನ್ನಹ

ಇದೇ ನನ್ನ ಮೊದಲನೇ ಕಾದಂಬರಿ. ಇದನ್ನು ಬರೆದು ಆಗಲೇ ಒಂದು ವರ್ಷದಮೇಲಾಯಿತು ನನ್ನನ್ನು ಕಾದಂಬರಿ ಬರೆಯುವಂತೆ ಪ್ರೋತ್ಸಾಹಿಸಿದವರು ಗೆಳೆಯರಾದ ಶ್ರೀ ರಾ. ವೆಂ ಶ್ರೀನಿವಾಸ ಮತ್ತು ಶ್ರೀ ರಾ. ನಾ. ಹಬ್ಬು ಇವರು "ತತ್ವ ಜೀವಿ" ಓದುಗರ ಮನಸ್ಸಿಗೆ ಸ್ವಲ್ಪವಾದರೂ ವಿಚಾರಲಹರಿಯನ್ನು ಕೊಟ್ಟಲ್ಲಿ—ವಿಷಯಗಳ ಮಥನಕ್ಕೆ ಎಡೆಮಾಡಿದಲ್ಲಿ—ಅದರ ಫಲ ಮೇಲಿನ ಇಬ್ಬರು ಗೆಳೆಯರಿಗೆ ಸಂಪೂರ್ಣವಾಗಿ ಸೇರತಕ್ಕದ್ದು ಹಾಗಲ್ಲದೆ, ಬೇಸರ ಉಂಟುಮಾಡಿದರೆ, ಲೇಖಕನ ಅನನುಭವವೇ ಕಾರಣವಲ್ಲದೆ ಮತ್ತೇನೂ ಅಲ್ಲ.

ಈ ಕಾದಂಬರಿಯಲ್ಲಿ ಬರುವ ಹೆಸರು, ಸನ್ನಿವೇಶಗಳು ಕೇವಲ ಊಹೆಗೆ ಸೇರಿದ್ದು. ಯಾವ ಜೀವಂತ ವ್ಯಕ್ತಿಯನ್ನಾಗಲೀ, ಸಂಸ್ಥೆಯನ್ನಾಗಲೀ ಉದ್ದೇಶಿಸಿ ಬರೆದಿಲ್ಲ.

ಈ ಕಾದಂಬರಿಯನ್ನು ಓದುತ್ತಾ ಹೋದಲ್ಲಿ, "ತತ್ವ ಜೀವಿ" ಎಂಬ ಹೆಸರಿಗೂ, ಕತೆಯ ನಿರೂಪಣೆಗೂ ಸಾಮ್ಯವಿದ್ದಂತೆ ಕಾಣದಿರಬಹುದು. ಆದರೆ "ತತ್ವ ಜೀವಿ"ಯ ಶಾಮನು, ಒಬ್ಬ ಸಾಧಕ ಮಾತ್ರ—ಸಿದ್ಧನಲ್ಲ. ಶಾಮನು ಯಾವ ತತ್ವವನ್ನೂ ಪ್ರತಿಪಾದಿಸಿಲ್ಲ—ಅಷ್ಟು ಶಕ್ತಿಯೂ ಅವನಲ್ಲಿಲ್ಲ. ತಾನು ಕಣ್ಣೆದುರಿಗೆ ಕಂಡ ವಿಷಯಗಳನ್ನೂ, ಸನ್ನಿವೇಶಗಳನ್ನೂ, ವ್ಯಕ್ತಿಗಳನ್ನೂ ಓದುಗರ ಮುಂದಿಟ್ಟಿದ್ದಾನೆ. ಅಂತಹ ಸನ್ನಿವೇಶಗಳಲ್ಲಿ, ವ್ಯಕ್ತಿಗಳೊಡನೆ ಶಾಮನು ನಡೆದ ರೀತಿ ಸರಿಯೋ, ತಪ್ಪೋ ಎನ್ನುವುದನ್ನು ವಾಚಕರೇ ನಿರ್ಧರಿಸಬೇಕು ಅವನಿಗೆ ಒದಗಿದ ಸನ್ನಿವೇಶಗಳು, ಕೆಲಸ ಮಾಡಿದ ಸಂಸ್ಥೆಗಳು, ಬಳಕೆಗೆ ಸಿಕ್ಕ ವ್ಯಕ್ತಿಗಳು, ಜೀವಿಸಿದ್ದರೂ ಇರಬಹುದೆಂದು ತೋರಿ, ಶಾಮನ ಒಳತೋಂಟಿ ಸಹಜವಾದುದೆಂದು ಭಾಸವಾದಲ್ಲಿ "ತತ್ವ ಜೀವಿ" ಬರೆದ ಉದ್ದೇಶ ಸಾರ್ಥಕವಾದಂತೆಯೇ ಸರಿ.

ಚಿತ್ರದುರ್ಗ
ಮಾರ್ಚಿ ೩೦, ೧೯೪೪

ಎನ್. ಸೂರಪ್ಪ

# ನಮ್ಮ ಮಾತು

'ಕತೆಗಾರ'ನ ವಾಚಕರಿಗೆಲ್ಲ ಚಿರ ಪರಿಚಿತರಾದ ಶ್ರೀಮಾನ್ ಎನ್. ಸೂರಪ್ಪನವರು ಉತ್ತಮ ವ್ಯಕ್ತಿ ಚಿತ್ರ ಲೇಖಕರು. ಇವರು ಬರೆದ 'ಬೇಬಿ ಮತ್ತು ಇತರ ಚಿತ್ರಗಳು' ಅದಕ್ಕೆ ನಿದರ್ಶನ ಇತ್ತೀಚೆಗೆ ಪ್ರಕಟವಾದ 'ರಾಯರ ಕಥೆಗಳು' ಕನ್ನಡ ಕಥಾ ಪ್ರಪಂಚದಲ್ಲಿ ನೂತನ ಪ್ರಯೋಗವಾಗಿದೆ.

'ತತ್ವಜೀವಿ' ಶ್ರೀಯುತರ ಮೊದಲನೆಯ ಕಾದಂಬರಿ ಇದನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತುದಕ್ಕಾಗಿ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು

ಒಂದು ಸಂತೋಷದ ಸುದ್ದಿ; ಸುಪ್ರಸಿದ್ಧ ಲೇಖಕರಾದ ಶ್ರೀಮಾನ್ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಬರೆದ 'ಹೇಮಾವತಿ' ಎಂಬ ಕಾದಂಬರಿ ನಮ್ಮ ಮಾಲೆಯ ಮುಂದಿನ ಕುಸುಮ

ರಾ. ವೆಂ. ಶ್ರೀನಿವಾಸ
ಸಂಪಾದಕ

# ತತ್ವಜೀವಿ

## ೧

ಅಂದಿನ ಹರಿಕಥೆ, ಕೇಳಿದವರ ಮನಸ್ಸಿನಮೇಲೆ ಯಾವ ಪರಿಣಾಮ ವನ್ನುಂಟುಮಾಡಿತೆಂಬುದನ್ನು ಹೇಳತೀರದು ಕಥೆ ಮುಗಿದು ಬಂದಿದ್ದವರು ಗುಂಪು ಗುಂಪಾಗಿ ತಮ್ಮ ಮನೆಗಳ ಮಾರ್ಗವನ್ನು ಹಿಡಿದಾಗ, ಅವರಲ್ಲಿ, ಕಥೆಯನ್ನು ಸುಶ್ರಾವ್ಯವಾಗಿ ಹೇಳಿದ ರಾಮದಾಸರ ಗುಣಗಾನವೇ ನಡೆದಿತ್ತು. ಹಿಂದೆಂದೂ ಇಂತಹ ರಸಘಟನೆಯು ತಮ್ಮ ಹಳ್ಳಿಯಲ್ಲಿ ನಡೆದಿರಲಿಲ್ಲವೆಂಬುದೇ ಎಲ್ಲರ ಅಭಿಪ್ರಾಯ.

* * * * *

ಮಾರನಹಳ್ಳಿ ಕೇವಲ ೩೦೦-೪೦೦ ಗುಡಿಸಲುಗಳನ್ನೂ, ಕೆಲವು ಹಂಚಿನ ಮನೆಗಳನ್ನೂ ಒಳಗೊಂಡ ಚಿಕ್ಕ ಹಳ್ಳಿಯೇ ಆಗಿದ್ದರೂ, ಅಲ್ಲಿನ ಜನರೆಲ್ಲ ಸುಧಾರಿಸಿದವರು. ಮಂಗಳೂರು ಈ ಹಳ್ಳಿಗೆ ಹತ್ತು ಮೈಲಿ ಮಾತ್ರ ಇದ್ದುದರಿಂದ ಪಟ್ಟಣದ ವಾತಾವರಣವು ಹರಡಲು ಅನುಕೂಲವಾಗಿತ್ತು. ಮಂಗಳೂರಿನ ಸುಪ್ರಸಿದ್ಧ ವ್ಯಾಪಾರಿಗಳಾದ ಸಾಹುಕಾರ್ ತಮ್ಮಯ್ಯನವರು ಒಂದು ಬಂಗಲೆಯನ್ನೂ, ಅನೇಕ ಜಮೀನುಗಳನ್ನೂ ಮಾರನಹಳ್ಳಿಯಲ್ಲಿ ಮಾಡಿದ್ದರು. ಪಟ್ಟಣದ ಜೀವನವು ಬೇಸರವಾದಾಗ ತಮ್ಮಯ್ಯನವರು ಹಳ್ಳಿಯಲ್ಲಿ ಕೆಲವು ಕಾಲ ಕಳೆಯುವುದು ಪದ್ಧತಿಯಾಗಿತ್ತು. ಹೀಗೆ ತಮ್ಮಯ್ಯನವರು ಒಂದು ಸಲ ಹಳ್ಳಿಯಲ್ಲಿ ಸಂಸಾರ ಸಮೇತ ಬಿಡಾರ ಮಾಡಿದ್ದಾಗಲೇ ರಾಮದಾಸರಿಂದ ಹರಿಕಥೆ ನಡೆದದ್ದು. ದಾಸರ ಹರಿಕಥೆ, ವಿಚಾರ ನಿರೂಪಣೆ, ವಿಷಯಗಳು ಎಲ್ಲರಿಗೂ ಚೆನ್ನಾಗಿ ಗೊತ್ತಿದೆ. ದಾಸರು ತಮ್ಮ ಆಯುಷ್ಯದ ಬಹು ಭಾಗವನ್ನು ಹರಿಕಥಾ ಕಾಲಕ್ಷೇಪದಲ್ಲಿ ಕಳೆದಿದ್ದರು. "ಅವರು ಸುತ್ತದ ಊರಿಲ್ಲ, ನೋಡದ ಪಟ್ಟಣವಿಲ್ಲ, ಓದದ ಗ್ರಂಥವಿಲ್ಲ" ಎಂಬುದು ಎಲ್ಲರ ಬಾಯಿಮಾತಾಗಿತ್ತು. ಜನರಿಗೆ ಹಿಡಿಯುವಂತೆ, ಅರ್ಥ ವಾಗುವಂತೆ, ರಸವತ್ತಾಗಿ, ಹೃದಯಕ್ಕೆ ಸಹಜವಾಗಿ ಮುಟ್ಟುವ ಭಾಷೆಯಲ್ಲಿ,

ವಿಚಾರ ತಿಳಿಸುವುದು ದಾಸರ ವೈಶಿಷ್ಟ್ಯ. ಅಂದು ಅನಿರೀಕ್ಷಿತವಾಗಿ ರಾಮ ದಾಸರು ತಮ್ಮ ನೆಂಟರೊಬ್ಬರನ್ನು ನೋಡಲು ಮಾರನಹಳ್ಳಿಗೆ ಬಂದಿದ್ದರು. ದಾಸರ ಹೆಸರನ್ನು ಪಟ್ಟಣದಲ್ಲೇ ಕೇಳಿದ್ದ ತಮ್ಮಯ್ಯನವರು, ಆ ದಿನ ಹಳ್ಳಿ ಯಲ್ಲೇ ಇದ್ದು, ಯಾವುದಾದರೂ ಕಥೆಯನ್ನು ಮಾಡಬೇಕೆಂದು ಕೇಳಿ ಕೊಂಡರು. ದಾಸರಿಗೆ ಬೇರೆ ಯಾವ ಕೆಲಸವೂ ಇರಲಿಲ್ಲವಾದ್ದರಿಂದ ತಮ್ಮಯ್ಯ ನವರ ಬಿನ್ನಹವನ್ನು ಮನ್ನಿಸಿದರು. ತಮ್ಮಯ್ಯನವರೂ ಸಾಹಿತ್ಯದಲ್ಲಿ ಸಾಕಷ್ಟು ಪರಿಶ್ರಮ ಹೊಂದಿದ್ದುದರಿಂದ "ಯಾವ ಕಥೆಯನ್ನು ಮಾಡುವಿರಿ" ಎಂದು ಕುತೂಹಲದಿಂದ ದಾಸರನ್ನು ಪ್ರಶ್ನಿಸಲು, ಅವರು ಮುಗುಳ್ನಗೆ ಸೂಸುತ್ತಾ "ಯಾವುದನ್ನು ಮಾಡಲಿ? ಭಕ್ತ ಕಬೀರ್, ಕಾಳಿದಾಸ, ರಾಮಾಯಣ, ಭಾರತ," ಇತ್ಯಾದಿ ಒಂದು ನೂರು ಹೆಸರುಗಳನ್ನು ಸೂಚಿಸಿ ದರು. ತಮ್ಮಯ್ಯನವರು ಕಾಳಿದಾಸ ಮಹಾಕವಿಯ ವಿಷಯವನ್ನು ಕೇಳಲು ಇಷ್ಟವುಳ್ಳವರಾಗಿ, ಅದನ್ನೇ ಹೇಳಬೇಕೆಂದು ಪ್ರಾರ್ಥಿಸಿದರು. ದಾಸರು ಒಪ್ಪಿ ತಮ್ಮ ನೆಂಟರ ಮನೆಗೆ ಹಿಂದಿರುಗಿದಾಗ ಬೆಳಿಗ್ಗೆ ೯ ಘಂಟೆ. ಆ ಸಂಜೆ ೬ ಘಂಟೆಯಿಂದಲೇ ತಮ್ಮಯ್ಯನವರ ಮನೆ ಮುಂದಿನ ಚಪ್ಪರದಲ್ಲಿ ಕಥೆ ನಡೆಯಲು ಏರ್ಪಾಡಾಯಿತು.

೨

"ರಾಮದಾಸರು ಮನೆಯಲ್ಲಿದ್ದಾರಾ?" ದಾಸರು ಇಳಿದುಕೊಂಡಿದ್ದ ನೆಂಟರ ಮನೆಯ ಮುಂದೆ ನಿಂತು ಶಾಮನು ಕೂಗಿದ. ಒಳಗಿನಿಂದ ದಾಸರೇ ಎದ್ದು ಬಂದು ಬಾಗಿಲು ತೆರೆದರು. ಮಧ್ಯಾಹ್ನ ಸುಮಾರು ೧೨ ಘಂಟೆ. ದಾಸರಿಗೆ ಊಟವಾಗಿತ್ತು. ಸಂಜೆ ಹರಿಕಥೆ ಮಾಡಬೇಕಾಗಿದ್ದ ಕಾಳಿದಾಸ ಕವಿಯ ಜೀವನ ಚರಿತ್ರೆಯಲ್ಲಿ ಕೆಲವು ಭಾಗಗಳನ್ನು ಜ್ಞಾಪಕಕ್ಕೆ ತಂದು ಕೊಳ್ಳುತ್ತಿದ್ದರು ಈ ಸಮಯದಲ್ಲಿ ಕೂಗಿದುದರಿಂದ ದಾಸರ ವ್ಯಾಸಂಗಕ್ಕೆ ತೊಂದರೆಯಾದರೂ ಮನಸ್ಸಿಗೆ ಹಚ್ಚಿಕೊಳ್ಳದೆ ಬಾಗಿಲನ್ನು ತೆಗೆದು ಎದುರಿಗೆ ನಿಂತಿದ್ದ ಸುಮಾರು ೨೦ ವರ್ಷದ ಯುವಕನನ್ನು ವಿನಯದಿಂದ "ಯಾರಪ್ಪ ನೀವು, ಏನು ಬೇಕು ರಾಮದಾಸರಿಂದ" ಎಂದು ಪ್ರಶ್ನಿಸಿದರು. ಶಾಮನಿಗೆ ತಾನು ರಾಮದಾಸರ ಮುಂದೆಯೇ ನಿಂತಿರುವೆನೆಂದು ತಕ್ಷಣ ತಿಳಿಯಿತು.

"ನಮಸ್ಕಾರ ದಾಸರೆ, ತಾವು ವಿರಾಮವಾಗಿದ್ದರೆ, ಸ್ವಲ್ಪ ಹೊತ್ತು ಮಾತಾಡ ಬೇಕಾಗಿತ್ತು" ಎಂದು ಉತ್ತರ ಕೊಟ್ಟ. ದಾಸರು "ಒಳಗೆ ಬಾ ಮಗೂ, ಮಾತಾಡೋಣ" ಎಂದು ಇನ್ನೊಂದು ಚಾಪೆಯನ್ನು ಶಾಮನಿಗಾಗಿ ಹಾಸಿದರು. ಚಾಪೆಯ ಮೇಲೆ, ದಾಸರ ಮುಂದೆ ಕುಳಿತನಂತರ ಶಾಮನು ದಾಸರಂತಹ ವಿದ್ಯಾವಂತರೊಡನೆ ಭೆಟ್ಟಿಯಾಗುವ ಸಮಯ ದೊರೆತಿದ್ದಕ್ಕಾಗಿ ಮನಸ್ಸಿನಲ್ಲಿಯೇ ಸಂತಸಪಡುತ್ತಾ "ದಾಸರೇ, ನನ್ನ ಬರುವಿಕೆಯಿಂದ ತೊಂದರೆ ಆಯಿತೇ" ಎಂದು ಕೇಳಿದ. "ತೊಂದರೆ ಏನಪ್ಪಾ, ಅಂತ ತೊಂದರೆಗಳನ್ನು ನಾನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಇಲ್ಲ ನೋಡಬೇಕೆಂದ. ಉತ್ಸಾಹದಿಂದ ಬಂದ ಜನರೊಡನೆ, ನಾಲ್ಕು ಮಾತಾಡಿದರೆ ಅದು ತೊಂದರೆಯೇ" ಎಂದು ನಗುತ್ತಾ ದಾಸರು ಹೇಳಿದಮೇಲೆ, ಶಾಮನು ತಾನು ಬಂದ ಕಾರ್ಯವನ್ನು ಹೇಗಾದರೂ ಮಾಡಿ ಸಫಲಗೊಳಿಸಿಕೊಂಡೇ ಹೋಗಬೇಕೆಂದು ನಿರ್ಧರಿಸಿದ. ಸ್ವಲ್ಪ ಹೊತ್ತಾದರೂ ಯಾವ ವಿಷಯವನ್ನೂ ಪ್ರಸ್ತಾಪಿಸದೆ ಸುಮ್ಮನೆ ಯೋಚಿಸುತ್ತಾ ಕುಳಿತಿದ್ದ ಯುವಕನನ್ನು ನೋಡಿ ದಾಸರೇ, "ನೀನು ಯಾರಪ್ಪಾ, ಎಷ್ಟು ಓದಿರುವಿ, ಈ ಹಳ್ಳಿಯಲ್ಲಿ ಏನು ಮಾಡಿಕೊಂಡಿದ್ದೀಯ" ಎಂದು ಪ್ರಶ್ನಿಸಿದರು. ಶಾಮನು ದಾಸರ ಪ್ರಶ್ನೆಗಳಿಗೆ ಸೂಕ್ಷ್ಮವಾಗಿ ಉತ್ತರ ಕೊಟ್ಟು "ನೀವು ಯಾವ ಹರಿಕಥೆಯನ್ನು ಈ ದಿನ ಮಾಡುತ್ತೀರಿ" ಎಂದು ಕೇಳಿದ.

"ತಮ್ಮಯ್ಯನವರು ಕೇಳಿದ, ಕಾಳಿದಾಸನ ವಿಷಯ"

"ಈ ವಿಷಯ ಜನರಿಗೆ ಅಭಿರುಚಿಯನ್ನುಂಟುಮಾಡುತ್ತದೆಯೇ"

"ಈ ಪ್ರಶ್ನೆಗೆ ಉತ್ತರ, ಆ ಮಹಾನುಭಾವನ ಜೀವನ ಚರಿತ್ರೆಯನ್ನು ನನ್ನ ಬಾಯಿಂದ ಕೇಳಿದಮೇಲೆ ಜನರು ಹೇಳಬೇಕು."

"ಇದುವರಿವಿಗೂ ತಮ್ಮಿಂದ ಕಥೆಗಳನ್ನು ಕೇಳಿದ ಜನರೆಲ್ಲಾ ತುಂಬಾ ಸಂತೋಷಪಟ್ಟಿದ್ದಾರೆ ದಾಸರೆ ಅದರಲ್ಲಿ ಸಂದೇಹವೇನೂ ಇಲ್ಲ ಆದರೆ ಜನರಿಗೆ ಉಪಯುಕ್ತವಾದ, ಮತ್ತು ದೈನಂದಿನ ಜೀವನಕ್ಕೆ ಮಾರ್ಗದರ್ಶಕವಾದ ವಿಷಯುಗಳನ್ನು ತಿಳಿಸಿದರೆ ಹೆಚ್ಚು ಉಪಕಾರಮಾಡಿದಂತಾಗುವುದಿಲ್ಲವೇ."

"ಹಾಗೆ ಉಪಕಾರವಾಗಲೀ ಎಂದೇ ನಾನು ಈ ಕೆಲಸ ಮಾಡುತ್ತಿರುವುದು. ಮಹಾನುಭಾವರ ಜೀವನದಲ್ಲಿನ ಸೂಕ್ಷ್ಮ ವಿಷಯುಗಳನ್ನು ಅರಿತು,

ಕಿಂಚಿತ್ತಾದರೂ ಆ ಮಾರ್ಗದಲ್ಲಿ, ಅವರು ಉಪದೇಶಿಸಿದಂತೆ, ನಡೆಯಲು ಪ್ರಯತ್ನಿಸುವಂತೆ ಮಾಡುವುದಕ್ಕಾಗಿಯೇ, ನಾನು ಈ ಶ್ರಮಪಡುತ್ತಿರುವುದು."

"ತಾವು ಹೇಳುವುದೇನೋ ಸರಿ ದಾಸರೇ—ಆದರೆ ನೀವು ತೋರಿಸುವ ಆದರ್ಶ ಮಾರ್ಗಗಳೆಲ್ಲಾ ಬಹು ಹಿಂದಿನವಲ್ಲವೇ. ಆ ಮಹಾತ್ಮರು ಹೇಳಿದ ವಾಕ್ಯಗಳೂ, ಉಪದೇಶಿಸಿದ ಮಾರ್ಗಗಳೂ ಅನುಕರಣೀಯವಾದರೂ, ಅವು ಹೆಚ್ಚಾಗಿ ಪರಿಸ್ಥಿತಿ, ವಾತಾವರಣ, ಜನರ ಮನಸ್ಸಿನ ಬೆಳವಣಿಗೆ ಇವುಗಳನ್ನು ಅನುಸರಿಸಿಕೊಂಡಿರುತ್ತದೆ, ಇದು ನಿಜವಲ್ಲವೇ ದಾಸರೇ."

"ನಿಜ. ಅದರಲ್ಲಿ ಸಂದೇಹವೇನು."

"ಅಂದಮೇಲೆ, ಸದ್ಯದ ಪರಿಸ್ಥಿತಿ, ವಾತಾವರಣಗಳಿಗೆ ಅನುಗುಣವಾಗಿ, ಈಗಿನ ಮಹಾತ್ಮರು, ತ್ಯಾಗಿಗಳು, ವೀರರು, ಹಾಕಿಕೊಟ್ಟಿರುವ ಮಾರ್ಗಗಳನ್ನು ಸಾಧಾರಣ ಜನರಿಗೆ ತೋರಿಸಿದರೆ ಹೆಚ್ಚು ಉಪಕಾರವಾಗುವುದಿಲ್ಲವೇ ಮತ್ತು ಜನರ ಮನಸ್ಸಿಗೆ ಈ ವಿಷಯಗಳು ಹೆಚ್ಚು ಹಿಡಿಸುವುದಿಲ್ಲವೇ."

"ಮಗೂ, ನೀನು ಹೇಳುವುದು ನಿಜ. ಹಿಂದಿನ ಮಹಾಪುರುಷರನ್ನು ನಾವು ಸ್ಮರಿಸಿದಾಗ್ಯೂ, ಈಗ ನಮಗೆ ಬೇಕಾದ ದಾರಿಯನ್ನು ಸರಿಯಾಗಿ ತೋರಿಸುವ ತ್ಯಾಗಿಗಳ, ವೀರರ, ಉಪದೇಶಗಳನ್ನು ತಿಳಿದುಕೊಳ್ಳಬೇಕು."

"ದಾಸರೇ, ನೀವೇ ಆಗಾಗ ಆ ಕಥೆಗಳನ್ನು ನಿಮ್ಮ ಸುಶ್ರಾವ್ಯ ಕಂಠದಿಂದ, ಸುರಿತ ವಾಣಿಯಿಂದ, ಜನರಿಗೆ ತಿಳಿಸಬಾರದೇಕೆ?"

"ಅಗತ್ಯವಾಗಿ ಆಗಬಹುದು. ಇದುವರಿವಿಗೂ ನನಗೆ ಯಾರೂ ಈ ರೀತಿ ಸಲಹೆಯನ್ನೇ ಕೊಟ್ಟಿರಲಿಲ್ಲ ಮಗೂ, ನೀನು ಇನ್ನೂ ಯುವಕನಾದರೂ ನಿನ್ನ ವಿಚಾರ ದೋಹನವು ಅತಿ ಗಹನವಾದುದು. ಇಂದು ನನಗೆ ನೀನು ತುಂಬಾ ಉಪಕಾರ ಮಾಡಿರುವಿ."

"ದಾಸರೆ, ಚಿಕ್ಕವನಾದ ನನ್ನ ತಲೆಯಲ್ಲಿ ಸುಳಿದಾಡುತ್ತಿದ್ದ ಅಭಿಪ್ರಾಯವೊಂದನ್ನು ನಿಮ್ಮ ಮುಂದಿಟ್ಟೆ. ಅದು ಸರಿಯೆಂದು ಭಾವಿಸಿದಿರಿ.

ಈ ವಿಷಯದಲ್ಲಿ ನೀವು ನಿಮ್ಮ ದೊಡ್ಡ ಮನಸ್ಸನ್ನೂ, ವಿಶಾಲ ಹೃದಯವನ್ನೂ ವ್ಯಕ್ತಪಡಿಸಿದ್ದೀರೇ ವಿನಹ ಬೇರೆ ಏನೂ ಇಲ್ಲ."

"ವಿಷಯವು ಸೂಕ್ತವಾಗಿದ್ದಲ್ಲಿ, ಸಲಹೆ ಯಾರಿಂದ ಬಂದರೆ ಏನು. ನಿನ್ನಲ್ಲಿ ದೊಡ್ಡ ತತ್ವಗಳು ತುಂಬಿರುವಂತೆ ನನಗನ್ನಿಸುತ್ತಿದೆ. ಈ ದಿನ ಯಾವ ಹರಿಕಥೆಯನ್ನು ಮಾಡಲಿ, ನೀನೇ ಹೇಳು."

ಶಾಮನಿಗೆ ಯೋಚನೆಗಾರಂಭವಾಯಿತು. ದಾಸರು ಅಷ್ಟು ಸರಳ ಹೃದಯದಿಂದ ತನ್ನ ಮಾತುಗಳಿಗೆ ಗೌರವ ಕೊಟ್ಟು ಆದರಿಸಿದ್ದರೂ "ಯಾವ ವಿಷಯ ಕುರಿತು ಹರಿಕಥೆ ಮಾಡಲಿ" ಎಂದು ಪ್ರಶ್ನಿಸಿದಾಗ, ಶಾಮನಿಗೆ ಸಮಂಜಸವಾದ ವಿಷಯವು ತಟ್ಟನೆ ಹೊಳೆಯಲಿಲ್ಲ. ಆದರೂ ಇಂತಹ ವಿಷಯದಲ್ಲೇ ಕಥೆಯನ್ನು ಮಾಡೀ ಎಂದು ಹೇಳುವ ಬದಲು, ವಿಶಾಲವಾದ ವಸ್ತುವನ್ನು ಅವರ ಮುಂದಿಟ್ಟು, ಅವರಿಂದಲೇ ಅನುಭವ ಪೂರ್ಣವಾದ, ರಸವತ್ತಾದ, ಸಾರವನ್ನು ಕೇಳುವುದು ಮೇಲೆಂದು ನಿರ್ಧರಿಸಿ "ದಾಸರೆ ವಿಷಯಗಳಿಗೇನು, ನಾವು ಕಣ್ಣಿಂದ ನೋಡುತ್ತಿರುವ ಯಾವ ಆದರ್ಶ ವ್ಯಕ್ತಿಯ ಮೇಲಾದರೂ ಮಾತಾಡಬಹುದು" ಎಂದ. ದಾಸರು ಸುಮ್ಮನೆ ಯೋಚಿಸುತ್ತಿದ್ದರು. ಒಂದೆರಡು ನಿಮಿಷಗಳ ನಂತರ ಶಾಮನು "'ಮಹಾತ್ಮರು' ಎಂಬ ವಿಷಯದಲ್ಲಿ ಹರಿಕಥೆ ಮಾಡಿ, ಹಿಂದಿನ ಮಹಾತ್ಮರನ್ನೆಲ್ಲಾ ಸ್ಮರಿಸಿ, ಈಗ ತನ್ನ ಜೀವಿತದಲ್ಲೇ ಆ ಹೆಸರನ್ನು ಗಳಿಸಿದ, ತ್ಯಾಗಿಯ ಚರಿತ್ರೆಯನ್ನು, ಆತನ ತತ್ವಗಳನ್ನು, ತೋರಿಸುತ್ತಿರುವ ಮಾರ್ಗಗಳನ್ನು ಹೇಳಿದರೆ ಚೆನ್ನಾಗಿರುವುದಿಲ್ಲವೇ" ಎಂದು ಪ್ರಶ್ನಿಸಿದ. ದಾಸರು ಮನಸ್ಸಿನಲ್ಲಿಯೇ ಶಾಮನ ಗುಣಕಥನ ಮಾಡುತ್ತಿದ್ದರು. ಅನಿರೀಕ್ಷಿತವಾಗಿ ಬಂದು ತನ್ನ ಸರಳ ಮಾತುಗಳಿಂದ ವಿಚಾರವೊಂದನ್ನು ಯಶಸ್ವಿಯಾಗಿ ಮಂಡಿಸಿದ ಯುವಕನ ಮುಖವನ್ನು ದಾಸರು ಸಂತೋಷದಿಂದ ನೋಡಿ "ಆಗಬಹುದು. ಅಗತ್ಯವಾಗಿ. ತಮ್ಮಯ್ಯನವರಿಗೆ ಭಕ್ತ ಕಾಳಿದಾಸನ ವಿಷಯ ಕಥೆ ಮಾಡುವುದಾಗಿ ಹೇಳಿದ್ದೇನೆ. ಆದರೂ ಚಿಂತೆಯಿಲ್ಲ. ಈ ಪ್ರಯೋಗ ಇಲ್ಲಿಂದಲೇ ಪ್ರಾರಂಭವಾಗಲಿ" ಎಂದರು. ಶಾಮನಿಗೆ ಸಂತಸವಾಯಿತೆಂದು ಹೇಳಬೇಕಾದ್ದಿಲ್ಲ. ದಾಸರಿಗೆ ನಮಸ್ಕರಿಸಿ ಮನೆಯ ಕಡೆ ಹಿಂದಿರುಗಿದ.

೩

ಶಾಮನ ಮೇಲ್ವಿಚಾರಣೆಯಲ್ಲಿ, ತಮ್ಮಯ್ಯನವರ ಮನೆ ಮುಂದೆ ವಿಶಾಲ
ವಾದ ಹಸರು ಚಪ್ಪರವು ಸ್ವಲ್ಪ ಹೊತ್ತಿನಲ್ಲಿಯೇ ಸಿದ್ಧವಾಯಿತು. ಶಾಮನೇ
ಸ್ವತಃ ಹಗ್ಗ ಕಟ್ಟಿ, ಚಾಪೆ ಬಿಗಿದು, ಎಲ್ಲಿ ಗಂಡಸರು ಕೂರಬೇಕು—ಹೆಂಗ
ಸರಿಗೆ ಸ್ಥಳವಾವುದು—ವೇದಿಕೆ ಎಲ್ಲಿರಬೇಕು ಎನ್ನುವುದನ್ನು ವಿಂಗಡಿಸಿ ಅಣಿ
ಮಾಡಿದ ತಮ್ಮಯ್ಯನವರೂ ಆಗಾಗ ಹೊರಗೆ ಬಂದು ಚಪ್ಪರವು ಸೊಗ
ಸಾಗಿ ನಿರ್ಮಿತವಾಗುತ್ತಿರುವುದನ್ನು ನೋಡಿಕೊಂಡು ಮನಸ್ಸಿನಲ್ಲಿಯೇ
ಹರ್ಷಿತರಾಗಿ ಮಿಕ್ಕ ಕೆಲಸಗಳಿಗೆ ಗಮನ ಕೊಡುತ್ತಿದ್ದರು. ಸಂಜೆ ಯಾವಾಗ
ಬರುತ್ತದೋ ಎಂದು ಆ ದಿನ ಮಾರನಹಳ್ಳಿಯ ಜನರೆಲ್ಲಾ ಉತ್ಸುಕತೆ
ಯಿಂದ ನಿರೀಕ್ಷಿಸುತ್ತಿದ್ದಂತೆ, ಮಧ್ಯಾಹ್ನವು ಮುಗಿದು ೫ ಘಂಟೆಯು ಹೊತ್ತಾ
ಯಿತು.

ರಾಮದಾಸರು ತಮ್ಮಯ್ಯನವರ ಮನೆಗೆ ಬಂದಾಗ ಸಂಜೆ ಐದೂವರೆ
ಘಂಟೆ. ಯಾವ ಆಡಂಬರವೂ ಇಲ್ಲದೆ ಶುಭ್ರವಾದ ಒಂದು ಪಂಚೆಯನ್ನು
ಉಟ್ಟು, ಬಿಳಿಯ ಬನೀನನ್ನು ತೊಟ್ಟು, ಮೇಲೊಂದು ವಸ್ತ್ರದಿಂದ ಅಲಂಕೃತ
ರಾಗಿ ದಾಸರು ತಮ್ಮಯ್ಯನವರ ಮನೆ ಮೆಟ್ಟಿಲನ್ನು ಹತ್ತಿದರು. ನಿರ್ಧರಿಸಿದ
ಕಾಲಕ್ಕೆ ಸರಿಯಾಗಿ ಕಥೆಯನ್ನು ಪ್ರಾರಂಭಿಸಿ, ಕೊಟ್ಟ ಅವಧಿಯೊಳಗೆ
ಪೂರೈಸುವುದು ದಾಸರ ಪದ್ಧತಿ. ಯಾವಾಗಲೂ ಅವರು ತಮ್ಮ ಹರಿಕಥೆ
ಗಳನ್ನು ಕಾಲ ಮೀರಿ ಮಾಡಿರಲಿಲ್ಲ—ದಾಸರ ಹರಿಕಥೆಯೆಂದರೆ, ಸಭಿಕರು
ಕಾಯುವ ಅಥವಾ ಬೇಸರಪಡುವ ಸನ್ನಿವೇಶಗಳು ಬರುತ್ತಲೇ ಇರಲಿಲ್ಲ.
ದಾಸರನ್ನು ಕಂಡೊಡನೆ ಉಪಚಾರದಿಂದ ತಮ್ಮಯ್ಯನವರು ಎದುರ್ಗೊಂಡು
ಮನೆಯೊಳಗೆ ಕರೆದುಕೊಂಡು ಹೋದರು. ಶಾಮನೇ ದಾಸರಿಗೆ ಹಣ್ಣು,
ಹಾಲು ತಂದುಕೊಟ್ಟ. ಶಾಮನ ಓಡಾಟವನ್ನೂ ಉತ್ಸಾಹವನ್ನೂ ಕಂಡು
ದಾಸರು "ತಮ್ಮಯ್ಯನವರೇ ಈ ಹುಡುಗ ನಿಮಗೇನಾಗಬೇಕು" ಎಂದು
ಪ್ರಶ್ನಿಸಲು, ತಮ್ಮಯ್ಯನವರು "ನಮ್ಮ ಬಳಿ ಗುಮಾಸ್ತನಾಗಿದ್ದಾನೆ" ಎಂದು
ಉತ್ತರ ಕೊಟ್ಟರು.

ಹರಿಕಥೆಯು ೬ ಘಂಟೆಗೆ ಸರಿಯಾಗಿ ಪ್ರಾರಂಭವಾಯಿತು. ಊರಿನ
ಜನರೆಲ್ಲಾ ಅಂದು ದೊಡ್ಡ ಹಬ್ಬವೆಂದು ಭಾವಿಸಿ, ಚಪ್ಪರದಲ್ಲಿ ತುಂಬಿದ್ದರು.

ತಮ್ಮಯ್ಯನವರೂ, ಅವರ ಮನೆಯ ಹೆಂಗಸರೂ ವೇದಿಕೆಯ ಹತ್ತಿರದಲ್ಲೇ ಕುಳಿತಿದ್ದರು. ಶಾಮನು ಮಾತ್ರ ಬಂದವರನ್ನು ಸರಿಯಾದ ಸ್ಥಳದಲ್ಲಿ ಕೂರಿಸುವುದು, ಗಲಭೆ ಮಾಡದಂತೆ ಬಿನ್ನವಿಸಿಕೊಳ್ಳುವುದೂ ಮುಂತಾದ ಕಾರ್ಯಗಳನ್ನು ನೋಡುತ್ತಿದ್ದ.

ಕಿಕ್ಕಿರಿದು ತುಂಬಿದ್ದ ಜನಸ್ತೋಮದೆದುರಿಗೆ ಎತ್ತರವಾದ ವೇದಿಕೆಯ ಮೇಲೆ ನಿಂತು ದಾಸರು ನಾಲ್ಕೈದು ನಿಮಿಷ ಕಣ್ಣುಮುಚ್ಚಿ ಮೌನವಾಗಿ ದೇವರ ಧ್ಯಾನ ಮಾಡಿದನಂತರ, ಉತ್ಸುಕತೆಯಿಂದ ನಿಶ್ಶಬ್ದವಾಗಿ ತಮ್ಮನ್ನೇ ನೋಡುತ್ತಿದ್ದ ಜನರನ್ನುದ್ದೇಶಿಸಿ, ಆ ದಿನದ ಕಥೆಯಲ್ಲಿ ಸ್ವಲ್ಪ ಬದಲಾವಣೆಯಾಗಿದೆ ಎಂದು ತಿಳಿಸಿ, ಅದಕ್ಕಾಗಿ ತಮ್ಮಯ್ಯನವರ ಮನ್ನಣೆ ಕೋರಿ, ಕಥೆಯನ್ನು ತಮ್ಮ ಸುಶ್ರಾವ್ಯ ಕಂಠದಿಂದ ಪ್ರಾರಂಭಿಸಿದರು. ಹಿಂದಿನ ಮಹಾತ್ಮರು, ಯೋಗಿಗಳು, ತ್ಯಾಗವೀರರು ಆದ ಜ್ಞಾನದೇವ, ನಾಮದೇವ, ಮುಂತಾದವರಿಂದ ಮೊದಲುಮಾಡಿ, ಕಾಳಿದಾಸ, ರಾಮದಾಸ, ತುಳಸಿದಾಸ, ಪುರಂದರದಾಸರ ಜೀವನ ಚರಿತ್ರೆಗಳನ್ನು ಸಂಕ್ಷೇಪವಾಗಿ ಸಭಿಕರ ಜ್ಞಾಪಕಕ್ಕೆ ತಂದುಕೊಟ್ಟು, "ಮಹಾತ್ಮ ಗಾಂಧಿಯವರ" ಜೀವನ ಚರಿತ್ರೆಯನ್ನೂ, ಅವರ ತತ್ವಗಳನ್ನೂ, ಅವರು ಹಾಕಿಕೊಟ್ಟಿರುವ ಮೇಲ್ಪಂಕ್ತಿಗಳನ್ನೂ, ಜನರಿಗಾಗಿ, ದೇಶಕ್ಕಾಗಿ ಅವರು ಮಾಡಿದ, ಮಾಡುತ್ತಿರುವ ತ್ಯಾಗವನ್ನೂ—ವಿಶದವಾಗಿ, ಮೆಟ್ಟಲು ಮೆಟ್ಟಲಾಗಿ, ಒಂದು ಸಣ್ಣ ಘಟನೆಯನ್ನೂ ಬಿಡದೆ, ನಿರರ್ಗಳವಾದ ವಾಕ್ಪ್ರವಾಹದಲ್ಲಿ, ಸಭಿಕರಿಗೆ ಮನಮುಟ್ಟುವಂತೆ, ಸಹಜವಾಗಿ ಅರ್ಥವಾಗುವಂತೆ, ಹೇಳಿದ ಮಾತುಗಳು ಅಚ್ಚಳಿಯದೆ ಮನಸ್ಸಿನಲ್ಲಿ ನಿಲ್ಲುವಂತೆ, ಕಥಾರೂಪದಲ್ಲಿಯೂ, ವಚನಗಳಲ್ಲಿಯೂ, ಹಾಡುಗಳಿಂದಲೂ ತಿಳಿಸಿದರು. ಹರಿಕಥೆ ಮುಗಿಯುವ ಹೊತ್ತಿಗೆ ರಾತ್ರಿ ೯ ಘಂಟೆಯಾಗಿತ್ತು. ಯಾವ ಕಥೆಯನ್ನೇ ಆಗಲಿ ರಾಮದಾಸರು ಆರು ಘಂಟೆಗೆ ಪ್ರಾರಂಭಿಸಿ ಎಂಟೂವರೆ ಘಂಟೆಗೆ ಸರಿಯಾಗಿ ಮುಗಿಸುವ ಪದ್ಧತಿ. ಆದರೆ ಈ ದಿನ ಅವರಿಗೂ ವಿಷಯದ ಸಂತಸದಲ್ಲಿ ಕಾಲದ ಗಣನೆಯೇ ಬರಲಿಲ್ಲ. ಬಂದಿದ್ದ ಜನರೆಲ್ಲ ಆನಂದಪಟ್ಟು ಕಥೆಯು ಇಷ್ಟು ಬೇಗ ಮುಗಿದುಹೋಯಿತಲ್ಲಾ ಎಂದುಕೊಂಡರು. ರಾಮದಾಸರಿಗೂ ಹರ್ಷವಾಯಿತು. ಆದರೆ ಆ ದಿನದ ಹರ್ಷಕ್ಕೆಲ್ಲಾ ಕಾರಣ ಶಾಮನೆಂಬುದು ದಾಸರಿಗೆ ಚೆನ್ನಾಗಿ ಗೊತ್ತಿತ್ತು. ಕಥೆ ಮುಗಿದು, ವೇದಿಕೆಯಿಂದ ಇಳಿದೊಡನೆ

ಶಾಮನನ್ನು ಹತ್ತಿರಕ್ಕೆ ಕರೆದು, ಮುಂದೆಯೂ ಒಳ್ಳೆಯ ತತ್ವಗಳಿಂದ ಜನರಿಗೆ ಮಾರ್ಗದರ್ಶಕನಾಗುವಂತೆ ಉಪದೇಶಿಸಿದರು.

೪

ಮಾರನಹಳ್ಳಿಯ ಜೋಡಿದಾರ್ ಕೃಷ್ಣಮೂರ್ತಿಯವರು ಸತ್ತು ೩೦–೩೫ ವರ್ಷಗಳಾಗಿದ್ದರೂ ಅವರ ಹೆಸರು ಇನ್ನೂ ಹಳ್ಳಿಯ ವಯಸ್ಸಿಗರಿಗೆಲ್ಲಾ ಚೆನ್ನಾಗಿ ನೆನಪಿದೆ. ಕೃಷ್ಣಮೂರ್ತಿ ಬದುಕಿದ್ದುದು ಒಳ್ಳೆಯ ಸುಭಿಕ್ಷೆ ಕಾಲದಲ್ಲಿ. ಪ್ರಪಂಚದ ನಾಗರಿಕತೆ ಇನ್ನೂ ಅಷ್ಟು ಮುಂದುವರೆದಿರಲಿಲ್ಲ. ವಿದ್ಯೆ, ವಿನಯ, ಸಂಪತ್ತಿದ್ದರೂ ಆಗಿನ ಜನರಿಗೆ ಸರಳ ಜೀವನವೂ ಪರೋಪಕಾರವೂ ರಕ್ತದಲ್ಲೇ ಒಂದಿರುತ್ತಿತ್ತು. ಕೃಷ್ಣಮೂರ್ತಿಯ ತಂದೆ ರಾಮಭಟ್ಟರು, ಆಗಿನ ಪಾಳೆಯಗಾರನೊಬ್ಬನಿಗೆ ಅವಶ್ಯಕವಾದ ಸಹಾಯವನ್ನು ಕೆಚ್ಚೆದೆಯಿಂದ ಮಾಡಿದುದರ ಫಲವಾಗಿ ಮಾರನಹಳ್ಳಿ ಅವರಿಗೆ ಜೋಡಿ ಗ್ರಾಮವಾಯಿತು. ಪಾಳೆಯಗಾರನ ಆಸರೆ ಸಿಕ್ಕಮೇಲೆ ರಾಮಭಟ್ಟರು ತಮ್ಮ ಬುದ್ಧಿಯಿಂದ, ಸಂಪತ್ತನ್ನು ಅಭಿವೃದ್ಧಿಗೊಳಿಸಿ, ಹತ್ತು ಅಂಕಣದ ಮನೆಯನ್ನು ಹಳ್ಳಿಯಲ್ಲಿ ಕಟ್ಟಿ, ಜನರಿಗೆಲ್ಲಾ ಆಪ್ತರಾದರು. ರಾಮಭಟ್ಟರು ತಮ್ಮ ೮೦ ನೇ ವರ್ಷವನ್ನು ನೋಡಿ ಈ ಪ್ರಪಂಚವನ್ನು ಬಿಡುವವರೆವಿಗೂ ಅವರ ಸಂಪತ್ತಿನಲ್ಲಾಗಲೀ ವಯಸ್ಸಿನಲ್ಲಾಗಲೀ ಸ್ವಲ್ಪವೂ ಕಮ್ಮಿಯಾಗಲಿಲ್ಲ. ಅವರ ಒಬ್ಬನೇ ಮಗನಾದ ಕೃಷ್ಣಮೂರ್ತಿಯವರು ಸಹ ತಂದೆಯಂತೆ ಜನಾನುರಾಗವನ್ನು ಸಂಪಾದಿಸಿ, ಕೀರ್ತಿಯನ್ನು ಗಳಿಸಿದರು. ಕೃಷ್ಣಮೂರ್ತಿಯವರಿಗೆ ಮುಪ್ಪಿನ ವಯಸ್ಸು ಸಮಿಾಪಿಸಿದ ಹೊತ್ತಿಗೆ ಸರಿಯಾಗಿ, ನಾಗರಿಕತೆಯ ಆಂದೋಲನವು ಗ್ರಾಮಗಳಿಗೆಲ್ಲಾ ಹೊಕ್ಕಿತು. ಮೇಲು, ಕೀಳು ಎಂಬ ಭೇದಭಾವಗಳೂ, ಮೋಸ ತಂತ್ರಗಳೂ ಜನರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಲಾರಂಭಿಸಿದವು. ಆದರೂ ಕೃಷ್ಣಮೂರ್ತಿಯವರು ತಮ್ಮ ತಂದೆಯು ಮಾಡಿಟ್ಟಿದ್ದ ಆಸ್ತಿಯನ್ನು ಕಳೆಯದೆ, ಹತ್ತು ಅಂಕಣದ ತಮ್ಮ ಮನೆಯನ್ನು ಗ್ರಾಮಸ್ಥರಿಗೆ ಕಾಮಧೇನುವಂತೆ ಉಪಯೋಗಕ್ಕೆ ಕೊಡುತ್ತಾ, ಹಳ್ಳಿಯಲ್ಲಿ ಗೌರವವನ್ನು ಸಂಪಾದಿಸಿ, ಕಾಪಾಡಿಕೊಂಡುಬಂದರು. ಕರೆಯುವ ೧೦-೧೨ ರಾಸುಗಳು, ನಾಲ್ಕು ಜತೆ ಎತ್ತು ಬಂಡಿಗಳೂ, ಅನೇಕ

ರೈತರೂ ಕೃಷ್ಣಮೂರ್ತಿಯವರ ಮನೆಯಲ್ಲಿದ್ದರು. ಯಾವ ವಿಧದಲ್ಲೂ ಕೃಷ್ಣಮೂರ್ತಿಯವರಿಗೆ ಅಸಂತುಷ್ಟಿಯಿಲ್ಲದಿದ್ದರೂ ಗಂಡುಮಕ್ಕಳಿಲ್ಲದ ಕೊರತೆ ಮಾತ್ರ ಅವರ ಜೀವವನ್ನೇ ಹಿಂಡಿಹಾಕಿತು. ಎಷ್ಟೋ ಪೂಜೆ, ಪುನಸ್ಕಾರ, ಹರಿಕೆ, ದೇವರ ಕಾರ್ಯಗಳನ್ನು ಮಾಡಿದರೂ ಗಂಡು ಸಂತಾನ ವಾಗಲಿಲ್ಲ. ಇದ್ದ ಒಬ್ಬ ಹೆಣ್ಣು ಮಗಳೇ ಮನೆಯ ಬೆಳಕಾಗಿದ್ದಳು. ಹೆಣ್ಣು ಮಗುವನ್ನೇ ಮಗನೆಂಬ ವಿಶ್ವಾಸದಿಂದ ನೋಡುತ್ತಿದ್ದರೂ ಪೂರ್ವಾಚಾರ ಸಂಪನ್ನರಾದ ಕೃಷ್ಣಮೂರ್ತಿಯವರಿಗೆ ಗಂಡುಮಕ್ಕಳಿಲ್ಲದುದರಿಂದ ತಾವು ಯಾವ ನರಕಕ್ಕೆ ಬೀಳಬೇಕಾಗುತ್ತೋ ಎಂಬ ಹೆದರಿಕೆ ಪೂರ್ತಿಯಾಗಿತ್ತು. ಕೃಷ್ಣಮೂರ್ತಿಯವರ ನಚ್ಚಿನ ಮಗಳಾದ ಪಾರ್ವತಮ್ಮನಿಗೆ ದೊಡ್ಡ ಗುಣ ಗಳೂ, ವಿಶಾಲ ಹೃದಯವೂ ರಕ್ತದಲ್ಲೇ ಬಂದಿತ್ತು. ವಯಸ್ಸಿನಲ್ಲಿ ಮುಂದು ವರೆದಂತೆಲ್ಲಾ ಪಾರ್ವತಮ್ಮ ಹಳ್ಳಿಯ ರೈತಾಪಿ ಜನಗಳ ವಿಶ್ವಾಸವನ್ನು ಸಂಪಾದಿಸಿದಳು. ಕಷ್ಟದಲ್ಲಿರುವವರಿಗೆ ಸಹಾಯ ಮಾಡಲು ಪಾರ್ವತಮ್ಮ ಮುಂದು ಬರುತ್ತಿದ್ದಂತೆ ಆ ಹಳ್ಳಿಯಲ್ಲೇ ಇನ್ಯಾರೂ ಬರುತ್ತಿರಲಿಲ್ಲ. ಪಾರ್ವ ತಮ್ಮನಿಗೆ ೧೨ ತುಂಬಿದ ಮಾರನೆ ವರ್ಷವೇ ಅತಿ ವಿಜೃಂಭಣೆಯಿಂದ ವಿವಾಹವು ನೆರವೇರಿತು. ಅನೇಕ ವರರನ್ನು ನೋಡಿ ವಂಶವೃಕ್ಷಗಳನ್ನರಿತು, ಗುಣಾವಗುಣಗಳನ್ನು ವಿಮರ್ಶಿಸಿ, ಪಾರ್ವತಮ್ಮನ ಒಪ್ಪಿಗೆಯನ್ನೂ ಪಡೆದು, ಕೃಷ್ಣಮೂರ್ತಿಯವರು ಆಕೆಯನ್ನು ನೆರೆಹಳ್ಳಿಯ ಶಾನುಭೋಗರ ಮಗ ರಾಮಶೇಷುವಿಗೆ ಕೊಟ್ಟಿದ್ದರು. ರಾಮಶೇಷುವಿಗೆ ಕೇವಲ ೧೯ ವರ್ಷ ವಯಸ್ಸು. ಆತನೇನೂ ಓದುಬರಹ ಕಂಡ ವಿದ್ಯಾವಂತನಾಗಿರಲಿಲ್ಲ. ಆದರೆ ಪರೋಪಕಾರ, ಕಷ್ಟಸಹಿಷ್ಣುತೆ, ಮುಂತಾದ ಸುಗುಣಗಳು ಅವನಲ್ಲಿ ತುಂಬಿ ದ್ದವು. ಇದರ ಜತೆಗೆ ಒಬ್ಬನೇ ಮಗ, ಪಿತ್ರಾರ್ಜಿತವಾದ ಆಸ್ತಿ ಸುಮಾರು ೫೦ ಸಾವಿರದವರೆಗೆ ಇದೆ ಎಂದು ಅಕ್ಕಪಕ್ಕದವರು ಮಾತಾಡಿಕೊಳ್ಳು ತ್ತಿದ್ದರು. ಈ ವಿವಾಹದಿಂದ ಎರಡು ಕಡೆಯವರಿಗೂ ಸಂತೋಷವು ಇಮ್ಮಡಿ ಯಾಯಿತು. ತಮ್ಮ ಸಂತಸವನ್ನು ವ್ಯಕ್ತಪಡಿಸಲು ಶಾನುಭೋಗರು ವಿವಾಹ ವಾದ ಮಾರನೆಯ ದಿನವೇ ತಮ್ಮ ಆಸ್ತಿಯನ್ನೆಲ್ಲಾ ಪಾರ್ವತಮ್ಮನ ಹೆಸರಿಗೆ ಬರೆದು ರಿಜಿಸ್ಟರು ಸಹಾ ಮಾಡಿಸಿದರು. ಇದನ್ನು ಕಂಡ ಕೃಷ್ಣಮೂರ್ತಿ ಯವರಿಗೆ ಆಶ್ಚರ್ಯವಾದರೂ, ಅವರ ಬೀಗರು ಯಾವುದೋ ಉದ್ದೇಶದಿಂದಲೇ

ಹಾಗೆ ಮಾಡಿದ್ದು ಎನ್ನುವ ವಿಷಯ ಸ್ವಲ್ಪ ದಿನಗಳಲ್ಲೇ ತಿಳಿಯಿತು. ರಾಮಶೇಷು ಪ್ರಪಂಚ ವ್ಯವಹಾರವನ್ನು ಚೆನ್ನಾಗಿ ತಿಳಿದವನಲ್ಲ ಎಂಬುದು ಅವನ ತಂದೆಯ ಅಭಿಪ್ರಾಯವಾಗಿತ್ತು. ಅವನ ಕೈಲಿ ಯಥೇಚ್ಛವಾಗಿ ಹಣವು ಸಿಕ್ಕಿದರೆ ಸರಿಯಾಗಿ ಖರ್ಚಾಗದೆ ಹೋಗಬಹುದೂ ಎಂಬ ಭೀತಿಯಿಂದ ಶಾನುಭೋಗರು ತಮ್ಮ ಸೊಸೆ ಹೆಸರಿಗೆ ಪತ್ರ ಬರೆದಿದ್ದರು.

ವಿವಾಹವಾದ ಮೂರು ವರ್ಷಗಳಲ್ಲಿ ಪಾರ್ವತಮ್ಮ ತನ್ನ ಗಂಡನ ಮನೆಯನ್ನು ಸೇರಿದಳು. ಮಗ, ಸೊಸೆ ನಕ್ಕು ನಲಿಯುವುದನ್ನು ಕೆಲವು ಕಾಲ ನೋಡಿ ಸಂತಸಪಟ್ಟು ಕಾರ್ಯವು ಸಫಲವಾಯಿತೆಂದು ಸಂತುಷ್ಟಿಯಿಂದ ಶಾನುಭೋಗರು ತಮ್ಮ ೬೦ನೇ ವಯಸ್ಸಿನಲ್ಲಿ ಈ ಲೋಕವನ್ನು ತ್ಯಜಿಸಿದರು. ಪಾರ್ವತಮ್ಮ ಮನೆ ಬಿಟ್ಟುಹೋದಮೇಲೆ ಕೃಷ್ಣಮೂರ್ತಿಯವರ ಸ್ಥಿತಿ ಹೇಳಲು ಸಾಧ್ಯವಿಲ್ಲ. ಮನೆಯಲ್ಲಿ ಮೇಲ್ವಿಚಾರಣೆ ನೋಡಿಕೊಂಡು ಆನಂದಸಾಗರವನ್ನೇ ಹರಿಸುತ್ತಿದ್ದ ಮಗಳು ಹೊರಟುಹೋದನಂತರ ಕೃಷ್ಣಮೂರ್ತಿಯವರಿಗೆ ಒಂದು ನಿಮಿಷ ಕಳೆಯಲು ಒಂದು ಯುಗದಂತೆ ಕಷ್ಟವಾಗತೊಡಗಿತು. ಈ ಕಷ್ಟದ ಜತೆಗೆ "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ವಾಕ್ಯವು ಅವರ ಕಣ್ಣೆದುರಿಗೆ ಸದಾ ಕಾಲವೂ ನಿಲ್ಲುತ್ತಿತ್ತು. ತಮ್ಮ ಮಗಳೂ ಅಳಿಯನನ್ನೂ ಕರೆದುಕೊಂಡುಬಂದು ಮಾರನಹಳ್ಳಿಯಲ್ಲೇ ಇಟ್ಟುಕೊಳ್ಳಬೇಕೆಂದು ಸಹಾ ಅವರು ಯೋಚಿಸಿ ರಾಮಶೇಷುವಿಗೆ ಹೇಳಿಕಳುಹಿಸಿದರು. ರಾಮಶೇಷು ಅವರ ಮಾತಿಗೆ ಎಂದೂ ಎದುರಾಡಿದವನಲ್ಲ. ಈ ವಿಷಯದಲ್ಲಿ ಪಾರ್ವತಮ್ಮನ ಸಮ್ಮತಿಯೂ ಸಂಪೂರ್ಣವಾಗಿದ್ದದರಿಂದ ಶಾನುಭೋಗರ ವರ್ಷಾಬ್ಧಿಕವನ್ನು ಮುಗಿಸಿ, ರಾಮಶೇಷು ತನ್ನ ಸಂಸಾರವನ್ನು ಮಾರನಹಳ್ಳಿಗೇ ಬದಲಾಯಿಸಿದ. ಕೃಷ್ಣಮೂರ್ತಿಯವರಿಗೆ ಪುನಃ ನವಚೇತನ ಬಂದಂತಾಯಿತು. ದಿನೇ ದಿನೇ ತಮ್ಮ ಮಗಳು ಸಂಸಾರ ನಿರ್ವಹಿಸುವ ರೀತಿಯನ್ನೂ, ಅಚ್ಚುಕಟ್ಟನ್ನೂ ನೋಡಿ ಸಂತಸಪಡಲಾರಂಭಿಸಿದರು.

ಕೃಷ್ಣಮೂರ್ತಿಯವರಿಗೂ ಅವರ ಹೆಂಡತಿಯಾದ ಸುಬ್ಬಮ್ಮನವರಿಗೂ ತಮ್ಮ ಮಗಳೂ ಅಳಿಯನ ವಿಷಯವಾಗಿ ಆದರ ಗೌರವಗಳು ಹೆಚ್ಚಾಗುದುದನ್ನು ಕಂಡು ಸುಬ್ಬಮ್ಮನವರ ಅಣ್ಣ ನಾಗೇಶಭಟ್ಟರಿಗೆ ಮನಸ್ಸು ವಿಕಲ್ಪವಾಯಿತು. ಬಹಳ ದಿನಗಳಿಂದಲೂ ಅವರಿಗೆ ತಮ್ಮ ಮಗನನ್ನು ಕೃಷ್ಣ

ಮೂರ್ತಿಯವರಿಗೆ ದತ್ತು ಕೊಡಬೇಕೆಂಬ ಹಂಬಲವು ಬೇರೂರಿತ್ತು. ಇದಕ್ಕೆ ಕಾರಣ ಬೇರೆ ಏನೂ ಅಲ್ಲದೆ ಕೃಷ್ಣಮೂರ್ತಿಯವರ ಅಪಾರ ಸಂಪತ್ತೇ ಆಗಿತ್ತು. ಮಗಳೂ ಅಳಿಯ ಮನೆಗೆ ಬಂದು ಕುಳಿತುದನ್ನು ಕಂಡು ನಾಗೇಶ ಭಟ್ಟರಿಗೆ, ಎಲ್ಲಿ ಆಸ್ತಿಯೆಲ್ಲಾ ಅವರ ಪಾಲಾಗುತ್ತೋ ಎಂಬ ಅನುಮಾನವಾಗಿ ಅಂದೇ ಸುಬ್ಬಮ್ಮನವರಲ್ಲಿಗೆ ಹೋಗಿ ಪುನಃ ವಿಷಯವನ್ನು ಪ್ರಸ್ತಾಪಿಸಿದರು. ಸುಬ್ಬಮ್ಮನವರಿಗೂ ತಮ್ಮ ಅಣ್ಣನ ಮಾತು ಸರಿಕಂಡು ಕೃಷ್ಣಮೂರ್ತಿ ಯವರವರೆಗೂ ವಿಷಯವು ಹಬ್ಬಿತು. ಮುಂದೆ ಪಾರ್ವತಮ್ಮನಿಗೂ ರಾಮ ಶೇಷುವಿಗೂ ತೊಂದರೆ ಬರಬಹುದೆಂದು ಅವರು ಅನುಮಾನಿಸಿದರೂ ನಾಗೇಶ ಭಟ್ಟರು ತಾವು ಮಗನನ್ನು ಕೊಡುವುದು ವಂಶ ಉದ್ಧಾರಕ್ಕಾಗಿಯೂ, ಹಣಕ್ಕಲ್ಲವೆಂದೂ ಭರವಸೆಕೊಟ್ಟು ಬೇಕಾದರೆ ಆಸ್ತಿಯೆಲ್ಲವನ್ನೂ ಪಾರ್ವ ತಮ್ಮನಿಗೇ ಕೊಟ್ಟರೂ, ತಾವು ಮಾತ್ರ ಖಂಡಿತವಾಗಿ ದತ್ತು ಕೊಡುವುದು ನಿಜವೆಂದು ವಾದಿಸಿದರು. ನಾಗೇಶಭಟ್ಟರೇನೂ ಹೊರಗಿನವರಾಗಿರಲಿಲ್ಲ. ಅಂದಮೇಲೆ ಯಾವ ಅನುಮಾನಕ್ಕೂ ಕಾರಣವಿರಲಿಲ್ಲ ವಿಷಯವನ್ನು ತಿಳಿದ ಪಾರ್ವತಮ್ಮನು ಸಹಾ ದತ್ತು ಸ್ವೀಕಾರ ಮಾಡಬೇಕೆಂದು ಸೂಚಿಸಿ ದಳು. ಅಂದಮೇಲೆ ಇನ್ನು ತಡವೆಲ್ಲಿ? ಹಳ್ಳಿಯಲ್ಲೆಲ್ಲಾ ಪುನಃ ಹಬ್ಬದಂತೆ ಓಡಾಟಗಳು ಪ್ರಾರಂಭವಾಗಿ, ಒಂದು ವಾರದನಂತರ ದತ್ತು ಸ್ವೀಕಾರದ ಮಹೋತ್ಸವವು ನಡೆದುಹೋಯಿತು. ಪಾರ್ವತಮ್ಮನೇ ಎಲ್ಲಾ ವಿಷಯ ಗಳಿಗೂ ಮೇಲಧಿಕಾರಿಯಾಗಿ ನಿಂತು ಎಲ್ಲರಿಂದಲೂ ಸರಿಯೆನ್ನಿಸಿಕೊಂಡು ಕೆಲಸವನ್ನು ಮಾಡಿದಳು.

ಮೊದಲು ಹತ್ತು ಅಂಕಣದ ಮನೆ ಅತಿ ದೊಡ್ಡದಾಗಿ ಕಾಣುತ್ತಿದ್ದ ಕೃಷ್ಣಮೂರ್ತಿಯವರಿಗೆ, ಈಗ ಮನೆ ಸರಿಯಾಗಿದೆ ಎನ್ನಿಸಿತು. ಮುಂಭಾಗ ವೆಲ್ಲಾ ರಾಮಶೇಷು, ಪಾರ್ವತಮ್ಮನಿಗೆ ವಿಶಾಲವಾಗಿತ್ತು. ಹಿಂಭಾಗದಲ್ಲಿ ಕೃಷ್ಣಮೂರ್ತಿ ಸುಬ್ಬಮ್ಮನವರು ತಮ್ಮ ದತ್ತು ಮಗನೊಂದಿಗೆ ಇರುತ್ತಿದ್ದರು. ಆದರೆ ವಿಧಿ ಈ ಸಂಸಾರವು ಹೀಗೆ ಸುಖವಾಗಿ ಇರುವಂತೆ ಬಹಳ ಕಾಲ ಬಿಡ ಲಿಲ್ಲ. ದತ್ತು ಮಗನಿಗೆ ಕೇವಲ ೧೦ ವರ್ಷ ವಯಸ್ಸಾದಾಗ ಕೃಷ್ಣಮೂರ್ತಿ ಯವರು ಯಾವುದೋ ಖಾಯಿಲೆಯಿಂದ ಒಂದೆರಡು ದಿನ ಮಾತ್ರ ಕೊರಗಿ ತೀರಿಹೋದರು. ಗಂಡ ಸತ್ತಮೇಲೆ ಸುಬ್ಬಮ್ಮನವರು ಬಹಳ ದಿನ ಬದುಕ

ಲಿಲ್ಲ. ಏನೂ ಅರಿಯದ ಹುಡುಗನ ಪೋಷಣೆಯ ಭಾರವೆಲ್ಲಾ ಪಾರ್ವತಮ್ಮನ ಮೇಲೆ ಬಿತ್ತು. ದುಃಖವನ್ನು ನುಂಗಿಕೊಂಡು ಕರ್ತವ್ಯದ ಕಡೆ ಗಮನ ಕೊಟ್ಟು ಪಾರ್ವತಮ್ಮ ಎಂದಿನಂತೆ ಸಂಸಾರ ಜರುಗಿಸಲು ಆರಂಭಿಸಿದಳು.

ತಮ್ಮ ಮಗ ಪಾರ್ವತಮ್ಮನ ವಶದಲ್ಲಿರುವುದು ನಾಗೇಶಭಟ್ಟರಿಗೆ ಸರಿದೋರಲಿಲ್ಲ. ಕೆಲವು ದಿನಗಳಲ್ಲೇ ಅವರು ಮಾರನಹಳ್ಳಿಗೆ ಬಂದು ಹುಡುಗನನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಪಾರ್ವತಮ್ಮ ರಾಮಶೇಷು ಎಷ್ಟು ವಿಧವಾಗಿ ಪ್ರಾರ್ಥಿಸಿದರೂ ನಾಗೇಶಭಟ್ಟರು ಕಿವಿಗೊಡದೆ ಇಲ್ಲದ ಆರೋಪಗಳನ್ನು ಮಾಡಿ ತಮ್ಮ ಊರಿಗೆ ಹಿಂದಿರುಗಿದರು. ನಾಗೇಶಭಟ್ಟರು ಬಂದುಹೋದ ೨೦ ದಿನಗಳಲ್ಲೇ ರಾಮಶೇಷುವಿನ ಕೈಗೆ ವಕೀಲರ ನೋಟೀಸೊಂದು ತಲುಪಿತು. ಕೋರ್ಟು ಕಛೇರಿಯೆಂದರೆ ನಡುಗುತ್ತಿದ್ದ ರಾಮಶೇಷು ಪಾರ್ವತಮ್ಮನವರ ಹೃದಯದ ಬಡಿತ, ನೋಟೀಸನ್ನು ಕಂಡಮೇಲೆ ಹೆಚ್ಚಾಯಿತೆಂದು ಹೇಳಬೇಕಾದ ಅವಶ್ಯಕವಿಲ್ಲ. ಕೃಷ್ಣಮೂರ್ತಿಯವರ ಚರಸ್ಥಿರ ಆಸ್ತಿಗೆಲ್ಲಾ ದತ್ತು ಮಗನೇ ಹಕ್ಕುದಾರನೆಂತಲೂ, ಅದನ್ನು ಎತ್ತಿಹಾಕಲು ಪಾರ್ವತಮ್ಮ ರಾಮಶೇಷು ಪ್ರಯತ್ನಿಸುತ್ತಿರುವಂತೆಯೂ, ಹಾಗೆ ಮಾಡದೆ ಏಳು ದಿನಗಳಲ್ಲಿ ಸಕಲ ಆಸ್ತಿಯನ್ನೂ ದತ್ತುಮಗನ ಪೋಷಕರಾದ ನಾಗೇಶ ಭಟ್ಟರ ವಶಕ್ಕೆ ಕೊಡಬೇಕೆಂತಲೂ ವಕೀಲರು ತಮ್ಮ ವ್ಯಾಕರಣಬದ್ಧವಾದ ಭಾಷೆಯಿಂದ ರಾಮಶೇಷುವಿಗೆ ಎಚ್ಚರಿಕೆ ಕೊಟ್ಟಿದ್ದರು. ಆ ದಿನವೇ ರಾಮ ಶೇಷು ನಾಗೇಶಭಟ್ಟರ ಹಳ್ಳಿಗೆ ಗಾಡಿ ಕಟ್ಟಿಸಿದ. ಮನೆಗೆ ಬಂದ ರಾಮಶೇಷುವನ್ನು ನೋಡಿ ಭಟ್ಟರ ಮನಸ್ಸು ಸಂತೋಷಪಟ್ಟಿತು—ತಾವು ಯೋಚಿಸಿದ್ದಂತೆಯೇ ತಮ್ಮ ಕಾರ್ಯವು ಕೈಗೂಡುವುದೆಂದು ಭರವಸೆಯುಂಟಾಯಿತು. "ಭಟ್ಟರೇ, ನಾವು ಆಸ್ತಿ ಕೊಡುವುದಿಲ್ಲವೆಂದು ಯಾವಾಗ ಹೇಳಿದಿವಿ. ಕೃಷ್ಣ ಮೂರ್ತಿಯವರ ಸ್ವತ್ತು ಅವರ ಮಗನದೆಂದು ನಮಗೂ ಗೊತ್ತು. ಯಾವಾಗ ಬೇಕಾದರೂ ತೆಗೆದುಕೊಳ್ಳಬಹುದು. ಇಷ್ಟಕ್ಕೆ ಕೋರ್ಟು, ಕಛೇರಿ, ವಕೀಲರು, ಯಾತಕ್ಕೆ" ಎಂದು ಮಾತಾಡುತ್ತಲೇ ರಾಮಶೇಷು ಮನೆಯೊಳಗೆ ಕಾಲಿಟ್ಟ. ಒಳಗೆ ಬಂದ ರಾಮಶೇಷುವನ್ನು ಕುಳಿತುಕೊಳ್ಳುವಂತೆ ಸಹಾ ಭಟ್ಟರು ಹೇಳಲಿಲ್ಲ—ಇವರಿಬ್ಬರೂ ಯಾಕೆ ಹೀಗೆ ಕೂಗಾಡುತ್ತಿದ್ದಾರೆಂದು ಉತ್ಸುಕತೆಯಿಂದ ನೋಡುತ್ತಿದ್ದ ಹುಡುಗನನ್ನು ಒಳಗೆ ಕಳುಹಿಸಿ,

ಭಟ್ಟರು "ಹಾಗಾದ್ರೆ ಮುಂದಿನ ವಾರ ನಮ್ಮ ವಕೀಲರನ್ನು ಕರೆದುಕೊಂಡು ಬರುತ್ತೇನೆ. ಪಟ್ಟಿಮಾಡಿ ಸ್ವತ್ತು ನನ್ನ ವಶಕ್ಕೆ ಬಿಟ್ಟುಕೊಡಿ" ಎಂದರು. "ಅಗತ್ಯವಾಗಿ ಬನ್ನಿ . . . ಬರುವಾಗ ನಿಮ್ಮ ಕುಟುಂಬವನ್ನೂ, ಹುಡುಗ ನನ್ನೂ ಕರೆತನ್ನಿ—ಎರಡು ದಿನ ನಮ್ಮಲ್ಲಿರಲಿ" ಎಂದು ಭಟ್ಟರ ಧೂರ್ತತನ ವನ್ನು ಅರಿಯದ ರಾಮಶೇಷು, ತಿಳಿಮನಸ್ಸಿನಿಂದ ಹೇಳಿ ಮಾರನಹಳ್ಳಿಗೆ ಹಿಂದಿರುಗಿದ. ಹೋದ ಕಾರ್ಯವು ಏನಾಯಿತೋ ಎಂದು ಪರಿತಪಿಸುತ್ತಿದ್ದ ಪಾರ್ವತಮ್ಮನಿಗೆ ನಡೆದ ವಿಷಯಗಳನ್ನು ರಾಮಶೇಷು ವಿಶದವಾಗಿ ಹೇಳಿ ದರೂ ಸೂಕ್ಷ್ಮಬುದ್ಧಿಯ ಪಾರ್ವತಮ್ಮನು ಮುಂದೆ ಅನಿಷ್ಟವು ಖಂಡಿತವಾಗಿ ಬರಬಹುದೆಂದು ಊಹಿಸಿದಳು. ನಾಗೇಶಭಟ್ಟರು ಬಂದೊಡನೆ, ದತ್ತು ಮಗನ ಆಸ್ತಿಯೆಲ್ಲವನ್ನೂ ವಹಿಸಿಕೊಡುವ ಏರ್ಪಾಡೂ ಮೊದಲಾಯಿತು. ಕೃಷ್ಣಮೂರ್ತಿಯವರ ಚರಸ್ಥಿರ ಆಸ್ತಿಗಳ ಪಟ್ಟಿಯನ್ನು ರಾಮಶೇಷು ಹಳ್ಳಿಯ ಯಜಮಾನನೊಡನೆ ಕುಳಿತು ತಯಾರಿಸಿದ. ನಾಗೇಶಭಟ್ಟರ ಕಿಡಿ ಗೇಡಿತನವನ್ನು ಕಂಡ ಹಳ್ಳಿಯ ಜನರೆಲ್ಲಾ, ಪಾರ್ವತಮ್ಮನ ಪರಿಸ್ಥಿತಿಗೆ ಮರುಗಿದರು.

ಹೇಳಿದ ದಿನ ನಾಗೇಶಭಟ್ಟರು ತಮ್ಮ ವಕೀಲರೊಂದಿಗೆ ಮಾರನಹಳ್ಳಿ ಯಲ್ಲಿದ್ದ ಕೃಷ್ಣಮೂರ್ತಿಯವರ ಮನೆಯನ್ನು ಪ್ರವೇಶಿಸಿದರು. ಭಟ್ಟರನ್ನು ಎಂದಿನಂತೆ ವಿಶ್ವಾಸದಿಂದ ಮಾತಾಡಿಸಿ, ಮನೆಯವರ ಯೋಗಕ್ಷೇಮವನ್ನು ವಿಚಾರಿಸಿ, ಆದರಿಸಲು ಪಾರ್ವತಮ್ಮ ಪಟ್ಟ ಪ್ರಯತ್ನ ನಿಷ್ಫಲವಾಯಿತು. ಭಟ್ಟರಿಗೆ ಯಾವ ಮಾತೂ ಬೇಕಿರಲಿಲ್ಲ—ಕೇಳಿದ ಪ್ರಶ್ನೆಗಳಿಗೆ ಒಂದೊಂದು ಮಾತಿನಲ್ಲಿ ಉತ್ತರವಿತ್ತು, ಊಟವಾದೊಡನೆ ಪಂಚಾಯಿತರನ್ನು ಬರ ಮಾಡಿದರು. ಹಳ್ಳಿಯ ಪಟೇಲ, ಶಾನುಭೋಗ ಮತ್ತು ಇನ್ನೂ ಕೆಲವು ಯಜಮಾನರು ಕೃಷ್ಣಮೂರ್ತಿಯವರ ಮನೆ ಹಜಾರದಲ್ಲಿ ಕಲೆತು ರಾಮ ಶೇಷು, ಪಾರ್ವತಮ್ಮ ತಯಾರಿಸಿದ್ದ ಆಸ್ತಿ ಪಟ್ಟಿಯನ್ನು ಪರಿಶೀಲಿಸಿ, ಎಲ್ಲವೂ ಸರಿಯಾಗಿದೆ ಎಂದು ಅಭಿಪ್ರಾಯಕೊಟ್ಟರು ಪಟ್ಟಿಯನ್ನು ಮೇಲಿಂದ ಕೆಳಗಿನ ವರೆಗೆ ಓದಿದ ಭಟ್ಟರ ಮುಖ ಮಾತ್ರ ವ್ಯಂಗ್ಯವಾಯಿತು. ಅದರಲ್ಲಿ ಇನ್ನೂ ಕೆಲವು ಆಸ್ತಿಗಳೂ, ಒಡವೆಗಳೂ ಸೇರಿಲ್ಲವೆಂದು ತಕರಾರು ತೆಗೆದರು. ಅದನ್ನು ಕೇಳಿದ ಪಾರ್ವತಮ್ಮನು ಒಳಗಿನಿಂದಲೇ ಮಾತಾಡಿ ಅವು ತನ್ನ ಗಂಡನಿಗೆ

ಸೇರಿದ್ದೆಂದು ತಿಳಿಸಿದಳು. ಭಟ್ಟರಿಗೆ ಸಮಾಧಾನವಾಗಲಿಲ್ಲ. ಆದರೂ ಕಾರ್ಯವನ್ನು ಕೆಡಿಸಬಾರದೆಂದು, ಪಟ್ಟಿಯಲ್ಲಿದ್ದ ಆಸ್ತಿಯನ್ನೆಲ್ಲಾ ತಮ್ಮ ವಶಕ್ಕೆ ತೆಗೆದುಕೊಂಡು ಊರಿಗೆ ಹಿಂದಿರುಗಿ ಮುಂದಿನ ಕಾರ್ಯವನ್ನು ಚಿಂತಿಸ ತೊಡಗಿದರು. ಪಾರ್ವತಮ್ಮನಿಗೆ ಮನಸ್ಸು ಸ್ವಲ್ಪ ಹಗುರಾಯಿತು. ಕೃಷ್ಣ ಮೂರ್ತಿಯವರ ಆಸ್ತಿಯಲ್ಲಿ ಎಳ್ಳಷ್ಟೂ ಆಕೆಗೆ ಬೇಕಿರಲಿಲ್ಲ. ರಾಮಶೇಷುವಿನ ಹಣವೇ ಆಕೆಯ ಬಳಿ ಯಥೇಚ್ಛವಾಗಿತ್ತು. ಆದರೂ ನಾಗೇಶಭಟ್ಟರ ನಡ ವಳಿಕೆಯಿಂದ ಪ್ರಪಂಚದಲ್ಲಿ ಧೂರ್ತರ ಮನಸ್ಸು ಅತಿಹೀನವಾದದ್ದು ಎಂಬುದು ಖಚಿತವಾಗಿ ತಿಳಿಯಿತು. ತಾವಿದ್ದ ಮನೆ, ಜಮೀನು, ಆಸ್ತಿಪಾಸ್ತಿಯೆಲ್ಲಾ ದತ್ತುಮಗನ ವಶಕ್ಕೆ ಹೋದಮೇಲೆ ಮಾರನಹಳ್ಳಿಯಲ್ಲಿರಬೇಕಾದ ಅವಶ್ಯಕ ವಿಲ್ಲವೆಂದು ಪಾರ್ವತಮ್ಮ, ರಾಮಶೇಷು ತಮ್ಮ ಹಳ್ಳಿಗೆ ಹಿಂದಿರುಗಿದರು. ಅವರು ಹೊರಡುವ ಮುನ್ನ ಭಟ್ಟರು ಮನೆಯ ಸ್ವಾಧೀನವನ್ನು ಪಡೆದು, ಸಾಮಾನುಗಳನ್ನೆಲ್ಲಾ ಎಣಿಸಿಕೊಂಡು, ಇನ್ನೂ ಕೆಲವು ಪಾತ್ರೆಪದಾರ್ಥ ಗಳೂ, ನಗಗಳೂ, ಮುಂತಾದ ಆಸ್ತಿಯನ್ನು ಪಾರ್ವತಮ್ಮ, ರಾಮಶೇಷು ಎತ್ತಿ ಹಾಕಿದ್ದಾರೆಂದು ಗೊಣಗಿದರು. ಹಳ್ಳಿಯ ಜನರು ಹೇಳಿದರೂ ಭಟ್ಟರ ಮನಸ್ಸಿಗೆ ಸಮಾಧಾನವಾಗಲಿಲ್ಲ. ಮುಂದೇನು ಮಾಡಬೇಕೆಂಬುದೇ ಅವರ ಯೋಚನಾಲಹರಿಯಾಯಿತು. ಊರಿಗೆ ಹೋಗಿ ಪುನಃ ವಕೀಲರನ್ನು ಕೇಳಿ ಕೊಂಡು ಬಂದರು. ಪಾರ್ವತಮ್ಮ ತನ್ನ ಮಾವನ ಗ್ರಾಮಕ್ಕೆ ಹಿಂದಿರುಗಿದ ಎರಡು ತಿಂಗಳಿನಲ್ಲೇ ಭಟ್ಟರು ಕೋರ್ಟಿನ ಮೆಟ್ಟಿಲನ್ನು ಹತ್ತಿ ದಾವಾ ಮಾಡಿದರು. ದಾವಾ ಪ್ರಕಾರ ಪಾರ್ವತಮ್ಮನ ಆಸ್ತಿಯೆಲ್ಲಾ ಅವರಿಗೆ ಬರ ಬೇಕೆಂಬುದೇ ಭಟ್ಟರ ಹಟ. ಎಲ್ಲವನ್ನೂ ಬಿಟ್ಟುಕೊಟ್ಟಮೇಲೂ ಅನಿಷ್ಟವು ಪ್ರಾಪ್ತವಾದುದನ್ನು ಕಂಡು ಪಾರ್ವತಮ್ಮನ ಮನಸ್ಸು ತುಂಬಾ ಕೊರಗಿತು. ಭಟ್ಟರು ದಾವಾ ಹಾಕಿದಮೇಲೆ, ಪಾರ್ವತಮ್ಮನು ತನ್ನ ಮಾವನ ಆಸ್ತಿ ಯನ್ನು ದಕ್ಕಿಸಿಕೊಳ್ಳಲು ತಕರಾರು ಹೂಡಲೇಬೇಕಾಯಿತು. ಜಮೀನುಗಳ ಸಾಗುವಳಿ, ರೈತರ ಕಷ್ಟ ಸುಖಗಳ ಕಡೆ ಗಮನಕೊಡುತ್ತಿದ್ದ ರಾಮಶೇಷು ಹಗಲಿರಳೂ ಕೋರ್ಟಿನ ಬಳಿ ತಿರುಗಲು ಪ್ರಾರಂಭಿಸಿದ. ಜಮೀನುಗಳಿಂದ ಬರುತ್ತಿದ್ದ ಆದಾಯ ಮೇಲ್ವಿಚಾರಕರಿಲ್ಲದೆ ಕಮ್ಮಿಯಾದಂತೆ, ಕೋರ್ಟಿಗೆ ಹೋಗಿಬರುವ ವಕೀಲರ ಖರ್ಚುಗಳು ಇಮ್ಮಡಿಯಾಯಿತು. ಸುಮಾರು

ಒಂದು ವರ್ಷದ ನಂತರ ಮುನ್ಸೀಫ್ ಕೋರ್ಟಿನವರು ಭಟ್ಟರ ದಾವೆಯನ್ನು ವಜಾಮಾಡಿದರು. ಭಟ್ಟರು ಎದೆಗುಂದದೆ ವಕೀಲರ ಮಾತಿನಂತೆ ಅಪೀಲು ಹೂಡಿದರು. ಆ ಕೋರ್ಟಿನಲ್ಲಿ ಎರಡು ವರ್ಷಗಳು ತಳ್ಳಿದಮೇಲೆ ಭಟ್ಟರ ದಾವ ಅವರು ಕೇಳಿಕೊಂಡಿದ್ದ ರೀತಿಯಲ್ಲಿ ಡಿಕ್ರಿ ಮಾಡಲಾಯಿತು. ರಾಮ ಶೇಷು ತನ್ನ ಜಮೀನುಗಳನ್ನು ಒತ್ತೆಯಿಟ್ಟು ಹೈಕೋರ್ಟಿಗೆ ಅಪೀಲು ಮಾಡಿದ. ಅಲ್ಲಿ ಒಂದು ವರ್ಷ ಒದ್ದಾಡಿದಮೇಲೆ ರಾಮಶೇಷುವಿನ ಅಪೀಲು ವಜಾ ಆಯಿತು ಭಟ್ಟರ ಸಂತಸವನ್ನು ಹೇಳತೀರದು. ಹಳ್ಳಿಯವರಿಗೆಲ್ಲಾ ಸುದ್ದಿಯನ್ನು ಮುಟ್ಟಿಸಿದರು. ಆದರೆ ವಾಸ್ತವಾಂಶವನ್ನು ತಿಳಿದಿದ್ದ ಮಾರನ ಹಳ್ಳಿಯ ಜನ ಕೃಷ್ಣಮೂರ್ತಿಯವರ ಮನೆತನವನ್ನೂ, ಪಾರ್ವತಮ್ಮ ರಾಮಶೇಷುವಿನ ಗುಣವನ್ನೂ ಕೊಂಡಾಡಿದರೇ ವಿನಹ ಭಟ್ಟರ ಗೆಲುವಿಗೆ ಬೆಂಬಲ ಕೊಡಲಿಲ್ಲ.

ಸುಮಾರು ನಾಲ್ಕೈದು ವರ್ಷಗಳು ಹಳ್ಳಿಯಿಂದ ಪಟ್ಟಣಕ್ಕೆ ಅಲೆದು ಹಣವನ್ನು ನೀರಿನಂತೆ ಖರ್ಚುಮಾಡಿದ್ದರ ಜತೆಗೆ ತಮ್ಮ ಆಸ್ತಿಯೂ ಕೃಷ್ಣ ಮೂರ್ತಿಯವರ ದತ್ತುಮಗನಿಗೆ ಸೇರತಕ್ಕುದೆಂದು ತೀರ್ಮಾನವಾದಮೇಲೆ ರಾಮಶೇಷು ಕಂಗಾಲಾದ. ಲಕ್ಷ್ಮಿ ತಾಂಡವವಾಡುತ್ತಿದ್ದ ಪಾರ್ವತಮ್ಮನ ಮನೆ ಬಿಕೋ ಎನ್ನಿಸಲಾರಂಭವಾಯಿತು. ಇನ್ನು ಕೋರ್ಟಿನವರ ಮೂಲಕ ಸ್ವಾಧೀನ ಮುಂತಾದ ಕ್ರಮಗಳನ್ನು ಭಟ್ಟರು ಪಡೆಯುವ ಬದಲು, ಯಾವ ಅವಮಾನವೂ, ಗಲಾಟೆಯೂ ಇಲ್ಲದೆ ಎಲ್ಲವನ್ನೂ ಅವರಿಗೆ ಒಪ್ಪಿಸಿ, ಕಾಶಿಯೋ, ರಾಮೇಶ್ವರವೋ, ಮೊದಲಾದ ತೀರ್ಥಕ್ಷೇತ್ರಗಳ ಹಾದಿ ಹಿಡಿಯುವುದು ಸೂಕ್ತವೆಂದು ನಿರ್ಧರಿಸಿ ಪಾರ್ವತಮ್ಮ ತನ್ನ ಗಂಡನೊಂದಿಗೆ ಮಾರನಹಳ್ಳಿಯಲ್ಲಿದ್ದ ನಾಗೇಶಭಟ್ಟರ ಮನೆಯನ್ನು ಪ್ರವೇಶಿಸಿದಳು. ಭಟ್ಟರು ಹೆಮ್ಮೆಯಿಂದ ಪಾರ್ವತಮ್ಮನನ್ನು ಜಗಲಿಯಮೇಲೆ ಕೂರುವಂತೆ ಸೂಚಿಸಿದರು. ಭಟ್ಟರ ಹೆಂಡತಿಗೆ ಮರುಕವುಂಟಾದರೂ ಅದನ್ನು ವ್ಯಕ್ತ ಪಡಿಸುವಷ್ಟು ಸ್ವಾತಂತ್ರ್ಯವಿರಲಿಲ್ಲ. ಅಷ್ಟು ಹೊತ್ತಿಗೆ ಸ್ವಲ್ಪ ತಿಳುವಳಿಕೆ ಬಂದಿದ್ದ ಕೃಷ್ಣಮೂರ್ತಿಯವರ ದತ್ತುಮಗ ಮಾತ್ರ ತನ್ನ ತಂದೆಯು ಮಾಡಿದ ಕಾರ್ಯವು ತಪ್ಪೆಂದು ನಿಂದಿಸಿದ. ಆದರೆ ಭಟ್ಟರ ಮಾತಿಗೆ ಎದು ರಾಡುವ ಜನರಾರೂ ಇರಲಿಲ್ಲ. ಪಾರ್ವತಮ್ಮ, ರಾಮಶೇಷು ತಮ್ಮ ಉಳಿದಿದ್ದ

ಸಂಪತ್ತನ್ನೂ ಒಪ್ಪಿಸಿ, ಉಟ್ಟ ಬಟ್ಟೆಯೊಂದಿಗೆ ರಾಮಶೇಷುವಿನ ಸೋದರ ಮಾವನಿದ್ದ ಮದರಾಸಿನ ಹಾದಿಯನ್ನು ಹಿಡಿದರು.

ಬರಬೇಕಾಗಿದ್ದ ಸಂಪತ್ತಿಗಿಂತ ಹೆಚ್ಚಾಗಿ ದೊರೆತಮೇಲೆ ಭಟ್ಟರ ಆನಂದವು ಇಮ್ಮಡಿಯಾಯಿತು. ಹೀಗೆ ಮಾಡಿದ್ದು ತುಂಬಾ ಅನ್ಯಾಯ ಎಂದು ಅವರ ಹೆಂಡತಿ ಹೇಳಿದಾಗ ಗದರಿಸಿ, ಆಕೆಯ ಬಾಯಿ ಮುಚ್ಚಿದರು. ಅದೇ ಮಾತು ಮಗನಿಂದ ಬಂದಾಗಲೂ ಅವನ ಮುಂದಿನ ಅಭಿವೃದ್ಧಿಗಾಗಿ ಈ ರೀತಿ ಮಾಡಬೇಕಾಯಿತೆಂದು ಸಮಾಧಾನಪಡಿಸಿದರು. ಪ್ರಪಂಚ ಜ್ಞಾನವನ್ನು ಸ್ವಲ್ಪ ಮಟ್ಟಿಗಾದರೂ ವಯಸ್ಸಿಗನುಗುಣವಾಗಿ ಹೊಂದಿದ್ದ ಹುಡುಗನು ತನ್ನ ತಂದೆಯು ಮಾಡಿದ ಕೃತ್ಯವು ಬಹಳ ಹೀನವಾದುದೆಂದು ಮನಸ್ಸಿನಲ್ಲಿಯೇ ಪರಿತಪಿಸಿದ ಆದರೆ ಏನು ಮಾಡಲೂ ದಾರಿಯಿರಲಿಲ್ಲ. ಭಟ್ಟರು ಸ್ವತ್ತುಗಳನ್ನೆಲ್ಲಾ ಕ್ರಮವಾಗಿ ಸ್ವಾಧೀನಕ್ಕೆ ತೆಗೆದುಕೊಂಡು, ಅದರ ಸಾಗುವಳಿ ಬಗ್ಗೆ ಸೂಕ್ತವಾದ ಏರ್ಪಾಡನ್ನು ಮಾಡಿ, ಹತ್ತು ಅಂಕಣದ ಮನೆಯನ್ನು ಶಾಲೆಗೆ ಬಾಡಿಗೆಗೆ ಕೊಟ್ಟು, ಸಂಸಾರ ಸಮೇತ ಮಂಗಳೂರನ್ನು ಸೇರಿದರು. ಅವರು ಹಳ್ಳಿಗಳನ್ನು ಬಿಟ್ಟ ಉದ್ದಿಶ್ಯ, ಮಗನಿಗೆ ಸರಿಯಾದ ವಿದ್ಯೆಯನ್ನು ದೊರಕಿಸಿ, ಉನ್ನತ ಸ್ಥಾನಕ್ಕೆ ಸೇರಿಸಬೇಕೆಂಬ ಬಯಕೆಯಿಂದ ಮಂಗಳೂರನ್ನು ಸೇರಿದಮೇಲೆ ಹುಡುಗನು ತನ್ನ ಸಂಸ್ಕೃತಿಗೆ, ಸರಿಯಾದ, ಗೌರವವಾದ ವಿದ್ಯೆಯನ್ನು ಪಡೆಯಲಾರಂಭಿಸಿದ. ನಾಗೇಶ ಭಟ್ಟರ ಮಗನಾದರೂ, ಹುಡುಗನಲ್ಲಿ ತಂದೆಯ ದುರ್ಗುಣಗಳಿರಲಿಲ್ಲ ಯಾವುದು ನ್ಯಾಯ, ಯಾವುದು ಅನ್ಯಾಯ ಎನ್ನುವ ವಿಮರ್ಶಕತ್ವ ಅವನಲ್ಲಿ ಚೆನ್ನಾಗಿ ಬೇರೂರಿತ್ತು. ಕೇವಲ ೪-೫ ವರ್ಷಗಳಲ್ಲೇ ಸಾಕಷ್ಟು ವಾಣಿಜ್ಯ ವಿದ್ಯೆಯನ್ನು ಕರಗತ ಮಾಡಿಕೊಂಡು, ಕೈಲಿದ್ದ ಹಣವನ್ನು ದ್ವಿಗುಣವನ್ನಾಗಿ ಮಾಡುವ ಪ್ರಯತ್ನವನ್ನು ನಡೆಸಿದ. ಹಿಡಿದ ಕಾರ್ಯಗಳೆಲ್ಲವೂ ಲಾಭದಾಯಕವಾಗಿ ಪರಿಣಮಿಸಲಾರಂಭವಾಯಿತು. ಕೃಷ್ಣಮೂರ್ತಿಯವರಿಂದ ಬಂದಿದ್ದ ಅಪಾರ ಆಸ್ತಿ, ಪಾರ್ವತಮ್ಮನ ಹಣ, ಕದಲದೆ ನಿಲ್ಲುವಂತೆ ಅವನ ದುಡಿತ ಹೆಚ್ಚಾಗುತ್ತಾ ಬಂದಿತು. ನಾಗೇಶ ಭಟ್ಟರು ಮಗನ ಬುದ್ಧಿಯನ್ನೂ, ಹಣ ಗಳಿಸುವ ರೀತಿಯನ್ನೂ ಕಂಡು ಆನಂದ ತುಂದಿಲರಾಗಿ ಹೆಚ್ಚು ವರದಕ್ಷಿಣೆ ಕೊಡಲು ಮುಂದೆ ಬಂದಿದ್ದ ಒಬ್ಬ ಸಾಹುಕಾರರ ಮಗಳನ್ನು ಹುಡುಗನಿಗೆ ಮದುವೆಮಾಡಿ, ಅವ

ನನ್ನು ಸಂಸಾರಕ್ಕೆ ಪ್ರವೇಶ ಮಾಡಿಸಿದರು. ಮಂಗಳೂರಿನಲ್ಲಿ ನಾಲ್ಕೈದು ಬಂಗಲೆಗಳೂ, ಒಂದೆರಡು ಅಂಗಡಿಗಳೂ ಅವನ ಹೆಸರಿನಲ್ಲಿ ತಲೆ ಎತ್ತಿದವು. ಬೇರೆ ಇನ್ನಾವ ಅನ್ಯಾಯಕ್ಕೂ ಕೈಹಾಕದೆ ನಾಗೇಶಭಟ್ಟರು ತಮ್ಮ ಹುಡುಗ ನಿಗೆ ಇಬ್ಬರು ಮಕ್ಕಳಾಗುವವರಿವಿಗೂ ಬದುಕಿದ್ದು, ನಂತರ ತಾವು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವೆನ್ನುವಂತೆ, ಸುಮಾರು ಒಂದು ವರ್ಷಕಾಲ ಮೈಯೆಲ್ಲಾ ಹುಣ್ಣುಗಳಿಂದ ನರಳಿ ಪ್ರಾಣಬಿಟ್ಟರು.

ದರಿದ್ರರಂತೆ ಉಟ್ಟ ಬಟ್ಟೆಯನ್ನು ಮಾತ್ರ ಹೊತ್ತು ಬಂದ ರಾಮಶೇಷು, ಪಾರ್ವತಮ್ಮನವರನ್ನು ಕಂಡು ರಾಮಶೇಷುವಿನ ಸೋದರಮಾವನಿಗೆ ಅತ್ಯಾಶ್ಚರ್ಯವಾಯಿತು. ತನ್ನ ಅಳಿಯ ಲಕ್ಷಾಧೀಶ್ವರನೆಂದು ಹೆಮ್ಮೆಪಡುತ್ತಿದ್ದ ಆತ. ಇವರ ಸ್ಥಿತಿಯನ್ನು ನೋಡಿ ಮರುಗಿದ—ವಿಷಯವೆಲ್ಲಾ ತಿಳಿದ ಮೇಲೆ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯಿತು. ಆದರೆ ಯಾರೂ ಏನನ್ನೂ ಮಾಡುವಂತಿರಲಿಲ್ಲ. ರಾಮಶೇಷುವಿನ ಸೋದರಮಾವ ಶ್ರೀಕಂಠಯ್ಯ ಯಾವುದೋ ಕಛೇರಿಯೊಂದರಲ್ಲಿ ೬೦ ರೂಪಾಯಿನ ಗುಮಾಸ್ತನಾಗಿದ್ದ. ಮನೆ ತುಂಬ ಮಕ್ಕಳು, ಜತೆಗೆ ರೋಗಿಯಾದ ಹೆಂಡತಿ. ಶ್ರೀಕಂಠಯ್ಯನ ಸ್ಥಿತಿಯಲ್ಲಿ ಬೇರೆ ಯಾರಾದರೂ ಇದ್ದಿದ್ದರೆ ಪ್ರಾಣ ಕಳೆದುಕೊಳ್ಳುವ ಉಪಾಯಗಳನ್ನು ಹುಡುಕಲು ಖಂಡಿತವಾಗಿ ಪ್ರಯತ್ನಿಸುತ್ತಿದ್ದರು. ಶ್ರೀಕಂಠಯ್ಯ ಅನೇಕ ಸಾರಿ ರಾಮಶೇಷುವಿನ ತಂದೆಯಿಂದ ಸಹಾಯಪಡೆದಿದ್ದ ಮತ್ತು ಸ್ವಭಾವತಃ ಇತರರ ಕಷ್ಟಗಳಿಗೆ ನೆರವಾಗುವ ಬುದ್ಧಿ ಅವನಲ್ಲಿತ್ತು. ಆದ್ದರಿಂದ ತನ್ನ ಪರಿಸ್ಥಿತಿಯಲ್ಲೂ, ಯಾವ ನೋವಿನ ಮಾತನ್ನೂ ಆಡದೆ, ಪಾರ್ವತಮ್ಮ ಮತ್ತು ಆಕೆಯ ಗಂಡನನ್ನು ತನ್ನ ಮನೆಗೆ ಬರಮಾಡಿಕೊಂಡು, ತನಗೆ ಬರುವ ಅಲ್ಪದರಲ್ಲಿ ಎಲ್ಲರೂ ಸುಖ ಕಾಣಲು ಪ್ರಯತ್ನಿಸಬೇಕೆಂದು ಕೇಳಿಕೊಂಡ. ಶ್ರೀಕಂಠಯ್ಯನನ್ನು ಪಾರ್ವತಮ್ಮ ಹಿಂದೆ ನೋಡಿರಲಿಲ್ಲ—ಹೆಸರು ಮಾತ್ರ ಕೇಳಿದ್ದಳು. ಆತನನ್ನು ನೋಡಿ, ಗುಣವನ್ನು ಕಂಡಮೇಲೆ, ಅವನ ಹೃದಯದ ವೈಶಾಲ್ಯವು ಆಕೆಯ ನೋವನ್ನೆಲ್ಲಾ ಮರೆಸಿತು. ಶ್ರೀಕಂಠಯ್ಯನ ಹೆಂಡತಿ ಸಹಾ ಪಾರ್ವತಮ್ಮನನ್ನು ಮಾತಿನಿಂದ ಉಪಚರಿಸಿ, ತಾವು ಆಕೆಯ ಋಣದಲ್ಲಿರುವುದಾಗಿ ತಿಳಿಸಿದಳು. ಅಂದಿನಿಂದ ಪಾರ್ವತಮ್ಮ, ರಾಮಶೇಷುವಿನ ನೂತನ ಜೀವನವು ಆರಂಭವಾಯಿತು. ಕ್ರಮೇಣ ಸಂಸಾರದ

ವ್ಯವಸ್ಥೆಯನ್ನೆಲ್ಲಾ ಪಾರ್ವತಮ್ಮ ಕೈಗೆ ತೆಗೆದುಕೊಂಡು, ಶ್ರೀಕಂಠಯ್ಯ ಸಂಪಾದಿಸುತ್ತಿದ್ದ ಹಣದಲ್ಲೇ ಮೊದಲಿಗಿಂತ ಉತ್ತಮವಾಗಿ ನಿರ್ವಹಿಸತೊಡಗಿದಳು. ಒಪ್ಪತ್ತೋ, ಅರೆಹೊತ್ತೋ ಉಂಡು ಜೀವನವನ್ನು ನಡೆಸುತ್ತಾ ಸುಮಾರು ೫-೬ ವರ್ಷಗಳು ಕಳೆದಮೇಲೆ, ಬಡವರಿಗೆ ಸಂತಾನ ಹೆಚ್ಚೆಂಬ ಮಾತನ್ನು ಸ್ಥಿರಪಡಿಸಲು ಪಾರ್ವತಮ್ಮ ಗರ್ಭಿಣಿಯಾದಳು. ಬೇಕಾದ ಹಾಗೆ ಮನೆ, ಆಸ್ತಿ, ಹಣವನ್ನು ಕೈಲಿಟ್ಟುಕೊಂಡು ಮಕ್ಕಳಾಗಲಿಲ್ಲಾ ಎಂದು ಕೊರಗುತ್ತಿದ್ದಾಗ ಇಲ್ಲದ ಫಲ, ಪಾರ್ವತಮ್ಮ ರಾಮಶೇಷುವಿಗೆ ಈಗ ಕಷ್ಟದಲ್ಲಿದ್ದಾಗ ಸಿಕ್ಕಿತು. ಶ್ರೀಕಂಠಯ್ಯನ ಸಹಾಯದಿಂದ ರಾಮಶೇಷು ಯಾವುದೋ ಅಂಗಡಿಯೊಂದರಲ್ಲಿ ಕೆಲಸಮಾಡಿ ಅಲ್ಪಸ್ವಲ್ಪ ದುಡಿಯುತ್ತಿದ್ದ. ಆದರೂ ಸಂಪಾದನೆ ಸಾಲುತ್ತಿರಲಿಲ್ಲ ನೋವಿನಮೇಲೆ ಪೆಟ್ಟು ಎಂಬಂತೆ ಪಾರ್ವತಮ್ಮನಿಗೆ ೬ ತಿಂಗಳು ಕಳೆದಮೇಲೆ ಶ್ರೀಕಂಠಯ್ಯನ ಹೆಂಡತಿ ದೈವಾಧೀನವಾದಳು. ಶ್ರೀಕಂಠಯ್ಯನ ಚಿಕ್ಕಮಕ್ಕಳ ಪೋಷಣೆಯ ಕರ್ತವ್ಯವು ಸಹಾ ಪಾರ್ವತಮ್ಮನ ಮೇಲೆ ಬಿದ್ದಿತು. ಎಷ್ಟು ಕಷ್ಟ ಬಂದರೂ ಎದೆಗುಂದದೆ ಆಕೆಯು ಇತರರಿಗೆ ಧೈರ್ಯ ಹೇಳುತ್ತಾ, ಸಮಾಧಾನ ಮಾಡುತ್ತಾ, ದಿನಗಳನ್ನು ಕಳೆದು ಮೂರು ತಿಂಗಳನಂತರ, ಮನೆಯಲ್ಲಿ ಹೆಣ್ಣು ದಿಕ್ಕಿರಲಿಲ್ಲವಾದ್ದರಿಂದ ಮದರಾಸಿನ ಸರ್ಕಾರಿ ಆಸ್ಪತ್ರೆಯೊಂದರಲ್ಲಿ ಗಂಡುಮಗುವನ್ನು ಹಡೆದಳು. ಮನೆಗಿಂತ ಸುಖವಾಗಿ ಹತ್ತು ದಿನಗಳು ಆಸ್ಪತ್ರೆಯಲ್ಲಿ ಕಳೆಯಿತು. ಹನ್ನೊಂದನೆಯ ದಿನ ರಾಮಶೇಷು ಹೆಂಡತಿಯನ್ನೂ ಮಗುವನ್ನೂ ಮನೆಗೆ ಕರೆದುಕೊಂಡು ಬಂದು, ತಾನೇ ಅಡಿಗೆ ಮುಂತಾದ ಕಾರ್ಯಗಳಿಗೆ ಕೈಹಚ್ಚಿದ ಅಕ್ಕಪಕ್ಕದ ಮನೆಯವರ ಸಹಾಯದಿಂದಲೂ, ರಾಮಶೇಷು ಶ್ರೀಕಂಠಯ್ಯನವರ ಮುತುವರ್ಜಿಯಿಂದಲೂ, ದಾರಿದ್ರ್ಯವಿದ್ದರೂ ಕಷ್ಟವಿಲ್ಲದೆ, ೬ ತಿಂಗಳು ಕಳೆಯಿತು. ತಮ್ಮ ಕಷ್ಟಸುಖಗಳನ್ನರಿಯದೆ ಸದಾ ಕಾಲವೂ ನಗುನಗುತ್ತ ಕಾಲಕಳೆಯುತ್ತಿದ್ದ ಮಗುವಿನ ಮುದ್ದು ಮುಖವನ್ನು ನೋಡಿದಾಗಲೆಲ್ಲಾ, ಪಾರ್ವತಮ್ಮನಿಗೆ, ಯಾತಕ್ಕೆ ಈ ಮಗುವು ಜನಿಸಿತೋ ಎನ್ನಿಸುತ್ತಿತ್ತು. ಹಾಗೆ ಬೇಸರವಾಗಲು ಕಾರಣ, ಮುಂದೆ ಯಾವ ಕಷ್ಟಗಳನ್ನೂ, ತೊಂದರೆಗಳನ್ನೂ ಏನೂ ಅರಿಯದ ಮಗುವು ಅನುಭವಿಸಬೇಕೋ ಎಂಬ ವಾತ್ಸಲ್ಯದ ಅನುಮಾನದಿಂದಲೇ ವಿನಹ ಬೇರೆ ಏನೂ ಆಗಿರಲಿಲ್ಲ. ಒಂದು ನಾಮಕರಣ, ಜಾತಕರ್ಮ,

ಮೊದಲಾದ ಹಬ್ಬಹರಿದಿನಗಳನ್ನು ಮಾಡಿಸಿಕೊಳ್ಳಲು ಆ ಮಗುವಿಗೆ ಯೋಗ್ಯತೆ ಇಲ್ಲದುದಕ್ಕಾಗಿ ತನ್ನ ಸ್ಥಿತಿಯನ್ನು ಜ್ಞಾಪಿಸಿಕೊಂಡು ರಾಮಶೇಷು ಕೊರಗುತ್ತಿದ್ದ. ನಾಮಕರಣವಾಗದಿದ್ದರೂ ಪಾರ್ವತಮ್ಮ ತನ್ನ ಮಗು ವನ್ನು "ಶಾಮು" ಎಂದು ಮುದ್ದಿಗಾಗಿ ಕೂಗಲಾರಂಭಿಸಿದಳು.

ಶಾಮುನಿಗೆ ಎರಡು ವರ್ಷ ವಯಸ್ಸಾದಾಗ, ಅವನಿಗೂ ಅವನ ತಾಯಿ ತಂದೆಯವರಿಗೆ ಆಸರೆಯಾಗಿದ ಶ್ರೀಕಂಠಯ್ಯನವರಿಗೆ ಮದರಾಸಿನಿಂದ ವರ್ಗ ವಾಯಿತು ಅಷ್ಟು ಹೊತ್ತಿಗೆ ರಾಮಶೇಷು ತನ್ನ ಸಹಜ ಗುಣಗಳಿಂದಲೂ, ಕಾಪಟ್ಯವಿಲ್ಲದ ಬುದ್ಧಿಯಿಂದಲೂ ಕೆಲಸಮಾಡುತ್ತಿದ್ದ ಸ್ಥಳದಿಂದ ತಿಂಗಳಿಗೆ ೩೦ ರೂಪಾಯಿಗಳನ್ನು ತರುತ್ತಿದ್ದ ವರ್ಗವಾದ ವಾರದೊಳಗೆ ಶ್ರೀಕಂಠಯ್ಯ ನವರು ತಮ್ಮ ದೊಡ್ಡ ಮಕ್ಕಳನ್ನು ಕರೆದುಕೊಂಡು ಕೆಲಸದ ಹಾದಿಯನ್ನು ಹಿಡಿದರು. ೩-೪ ವರ್ಷದ ಮಗುವೊಂದು ಮಾತ್ರ ಪಾರ್ವತಮ್ಮನ ಬಳಿ ಶಾಮುನ ಒಡನಾಡಿಯಾಗಿ ನಿಂತಿತು. ಮದರಾಸಿಗೆ ಬಂದು ಆಗಲೇ ಹಲವಾರು ವರ್ಷಗಳು ಉರುಳಿಹೋಗಿದುದರಿಂದ ಪಾರ್ವತಮ್ಮ ರಾಮಶೇಷುವಿಗೆ ತಮ್ಮ ಹಿಂದಿನ ಸ್ಥಿತಿಯೆಲ್ಲಾ ಕ್ರಮೇಣ ಮರೆಯುತ್ತಾ ಬಂದಿತು. ತಾವು ಹೀಗೆ ದಾರಿದ್ರ್ಯದಲ್ಲೇ ಜನ್ಮವೆತ್ತಿದ್ದರೆಂಬಂತೆ ಪರಿಸ್ಥಿತಿಗನುಗುಣವಾಗಿ ಜೀವನ ನಡೆಸುವುದರಲ್ಲಿ ನಿರತರಾದರು

ಯಾವ ಹೆಚ್ಚಿನ ವಿಶೇಷವೂ ಇಲ್ಲದೆ ಇನ್ನು ಮೂರು ವರ್ಷಗಳ ಕಾಲ ಮುಂದೆ ಹೋಯಿತು. ಶಾಮುನನ್ನು ಒಳ್ಳೆಯ ಗುಣವಂತನನ್ನಾಗಿ ಮಾಡ ಬೇಕೆಂಬ ಸದುದ್ದೇಶದಿಂದ ಪಾರ್ವತಮ್ಮ ಮೂರು ಹೊತ್ತೂ ಅವನ ಬುದ್ಧಿ ಯನ್ನು ತಿದ್ದುವ ಕಾರ್ಯದಲ್ಲೇ ತೊಡಗುತ್ತಿದ್ದಳು. ತನ್ನ ೫ ನೇ ವಯಸ್ಸಿ ನಿಂದ ಶಾಮುನು ಶಾಲೆಗೆ ಹೋಗಲು ಪ್ರಾರಂಭಿಸಿದ ಬರುತ್ತಿದ್ದ ಅಲ್ಪ ಹಣ ದಲ್ಲಿಯೇ ಅವನಿಗೆ ಅತ್ಯಾವಶ್ಯಕವಾಗಿ ಬೇಕಾದ ಬಟ್ಟೆಬರೆಗಳೂ, ಸ್ಲೇಟು ಬಳಪಗಳೂ ಒದಗಿಸಲ್ಪಡುತ್ತಿದ್ದವು.

ಶಾಮುನು ತನ್ನ ಮೂರನೇ ತರಗತಿಯಲ್ಲಿದ್ದಾಗ ಪಾರ್ವತಮ್ಮ ತನ್ನ ಇಹಲೋಕದ ವ್ಯಾಪಾರವನ್ನು ಮುಗಿಸಿದಳು. ಹುಟ್ಟಿದ ಕೆಲವು ವರ್ಷಗಳನ್ನು ಬಿಟ್ಟರೆ, ಜ್ಞಾನ ಬಂದ ಉಳಿದ ಕಾಲವೆಲ್ಲಾ ಆಕೆಯ ಜೀವನವು ಕಷ್ಟಮಯ ವಾಗಿತ್ತು. ಆದರೂ ಧೈರ್ಯಗುಂದದೆ ಆಕೆ ತನ್ನ ಕರ್ತವ್ಯವನ್ನು ಮಾಡಿ

ದರೂ, ದೇಹವು ಎಷ್ಟು ತಾನೆ ಸಹಿಸಬಲ್ಲದು? ಅಲ್ಪ ವಯಸ್ಸಿನಲ್ಲೇ ಆಕೆಯು ಯಾವುದೋ ಕಾಯಿಲೆಯ ಬಾಯಿಗೆ ತುತ್ತಾದಳು. ರಾಮಶೇಷುವಿಗೆ ದಿಕ್ಕೇ ತೋಚಲಿಲ್ಲ. ಶ್ರೀಕಂಠಯ್ಯನೂ ಬಂದು ತನ್ನ ಕೈಲಾದ ಸಹಾಯವನ್ನೂ ಸಮಾಧಾನವನ್ನೂ ಮಾಡಿ, ತನ್ನ ಮಗುವನ್ನು ಕರೆದುಕೊಂಡು ಹಿಂದಿರುಗಿದ. ಕೇವಲ ೮-೯ ವಯಸ್ಸಿನ ಶಾಮುನಿಗೆ ತಾಯಿಯ ಸಾವಿನಿಂದ ಆದ ನಷ್ಟವು ಚೆನ್ನಾಗಿ ಗೊತ್ತಿತ್ತು. "ತಾಯಿ" ಎಂಬ ಜೀವದ ಬೆಲೆ, ಶಕ್ತಿ, ಅವನಿಗೆ ಸಂಪೂರ್ಣವಾಗಿ ಅರ್ಥವಾಗಿತ್ತು. ಆದರೂ ಯಾರೂ ಏನೂ ಮಾಡು ವಂತಿರಲಿಲ್ಲ. ಹೀಗೆ ಇನ್ನು ನಾಲ್ಕು ವರ್ಷಗಳು ಕಳೆಯುವುದರೊಳಗೆ ಹೆಂಡತಿಯ ಸಾವಿನಿಂದ ಮರುಗುತ್ತಿದ್ದ ರಾಮಶೇಷು ತನ್ನ ಜೀವವನ್ನು ತೊರೆದ ಶಾಮುನಿಗೆ ೧೪ ವರ್ಷ ವಯಸ್ಸಾದಾಗ ಅವನೊಬ್ಬ ಅನಾಥ ಮುಂದೇನು ಮಾಡಬೇಕೆಂದು ಕೊರಗುತ್ತಿದ್ದ ಶಾಮುನ ಸಹಾಯಕ್ಕೆ ಆಗ ಒದಗಿದವರ ಪೈಕಿ ಅವನ ಸಹಪಾಠಿಯೂ ಬಾಲ್ಯ ಸ್ನೇಹಿತನೂ ಆದ ಕಿಟ್ಟುವು ಅತಿಮುಖ್ಯನಾದವನು. ಕಿಟ್ಟುವಿನ ತಂದೆಗೆ ಸಾಕಾದಷ್ಟು ಐಶ್ವರ್ಯ ವಿತ್ತು. ಅವರು ಮದರಾಸಿಗೆ ೬೦ ಮೈಲಿ ದೂರವಿದ್ದ ಹಳ್ಳಿಯೊಂದರಲ್ಲಿ ಜಮೀನ್ದಾರರಾಗಿದ್ದರು. ಆದ್ದರಿಂದ ಕಿಟ್ಟುವು ಮದರಾಸಿನ ವಿದ್ಯಾರ್ಥಿ ನಿಲಯದಲ್ಲಿದ್ದುಕೊಂಡು ವ್ಯಾಸಂಗವನ್ನು ಮಾಡುತ್ತಿದ್ದ. ಶಾಮುನ ತಂದೆಯೂ ತೀರಿಹೋದ ವಿಷಯವನ್ನು ತಿಳಿದು, ಕೊರಗುತ್ತಿದ್ದ ಶಾಮುನನ್ನು ಕಿಟ್ಟುವು ತಾನಿದ್ದ ಸ್ಥಳಕ್ಕೆ ಕರೆದುಕೊಂಡುಹೋಗಿ, ತನ್ನೊಡನೆ ಇದ್ದು ವ್ಯಾಸಂಗ ವನ್ನು ಮುಂದುವರಿಸುವಂತೆ ಏರ್ಪಾಡು ಮಾಡಿದ. ಕೇಳುವವರು ದಿಕ್ಕಿಲ್ಲ ದಿರುವಾಗ ಮಿತ್ರನ ಆತಿಥ್ಯವನ್ನು ನಿರಾಕರಿಸಲು ಶಾಮುನಿಗೆ ಕಾರಣ ವಿರಲಿಲ್ಲ. ತಂದೆಯು ಸತ್ತನಂತರ ಕರ್ಮಾದಿಗಳನ್ನು ಆದಷ್ಟು ಸುಲಭ ಖರ್ಚಿನಲ್ಲಿ ಮುಗಿಸಿ, ಕಿಟ್ಟುವಿನ ಕೋಣೆಗೆ ತನ್ನ ಸಾಮಾನುಗಳೊಂದಿಗೆ ಬದಲಾಯಿಸಿದ.

ವಿದ್ಯಾಭ್ಯಾಸವು ಎಂದಿನಂತೆ ಮುಂದುವರೆಯಿತು. ಕಿಟ್ಟುವು ಪಠ್ಯ ಪುಸ್ತಕಗಳ ಓದಿನಲ್ಲಿ ಅಷ್ಟು ಬುದ್ಧಿವಂತನಲ್ಲದಿದ್ದರೂ, ಆಟಗಳಲ್ಲಿ, ಪ್ರಪಂಚ ಜ್ಞಾನದಲ್ಲಿ, ಅವನು ಎಲ್ಲರಿಗೂ ಮೊದಲನೆಯವನಾಗಿದ್ದ. ಶಾಮುನಾದರೋ ಎರಡರಲ್ಲೂ ಕಿಟ್ಟುವನ್ನು ಮೀರಿಸಿ, ಅವನ ಸಂತೋಷವನ್ನು ಸಂಪಾದಿಸಿ

ಕೊಂಡಿದ್ದನೆನ್ನಬಹುದು. ಯಾವ ತರಗತಿಯಲ್ಲೂ ಹಿಂದುಳಿಯದೆ ಇಬ್ಬರೂ ಪ್ರೌಢಶಾಲೆಯನ್ನು ದಾಟಿ ಕಾಲೇಜಿನ ಮೆಟ್ಟಲು ಹತ್ತಿದರು. ಇಷ್ಟು ಹೊತ್ತಿಗೆ ಶಾಮು ಕಿಟ್ಟುವಿನಲ್ಲಿ ಭ್ರಾತೃವಾತ್ಸಲ್ಯವು ಬಂದುಹೋಗಿತ್ತು. ಅನಾಥನಾದ ಹುಡುಗನೊಬ್ಬನು ತಮ್ಮ ಮಗನ ಜತೆಯಲ್ಲಿರುವನೆಂದೂ, ಆತನು ಬಹಳ ಮೇಧಾವಿಯೆಂದೂ ತಿಳಿದಮೇಲೆ, ಕಿಟ್ಟುವಿನ ತಂದೆಯವರು ಮಗನಿಗೆ ಕಳುಹಿಸುತ್ತಿದ್ದ ಹಣದ ಜತೆಗೆ ಇನ್ನೂ ಸ್ವಲ್ಪ ಸೇರಿಸಿ ಕಳುಹಿಸುತ್ತಿದ್ದರು. ಕಾಲೇಜಿಗೆ ಬಂದ ಒಂದೆರಡು ತಿಂಗಳಿನಲ್ಲೇ ಶಾಮುನ ಬುದ್ಧಿಯು ಅನೇಕ ವಿಧದಲ್ಲಿ ಚುರುಕಾಗಿದೆ ಎಂಬ ವಿಷಯವು ಅವನ ಮಾತುಕಥೆಗಳಿಂದಲೂ, ಪಾಠಪ್ರವಚನ, ನಡೆನುಡಿಗಳಿಂದಲೂ ಎಲ್ಲರಿಗೂ ಅರ್ಥವಾಯಿತು. ಕಿಟ್ಟುವು ಸಹಾ ಶಾಮುನ ಗುಣಗಳನ್ನು ಕಂಡು ಅವನೆದುರಿಗೇ ಅನೇಕ ಬಾರಿ ಹೊಗಳಿದ್ದ. ಆದರೆ ದುರ್ದೆಶೆಯು ಮುಂದೆ ಬುದ್ಧಿಯ ಶಕ್ತಿ ನಡೆಯಲು ಎಲ್ಲಿ ಸಾಧ್ಯ ಇಂಟರ್ ಪರೀಕ್ಷೆಯು ನಡೆಯುತ್ತಿದ್ದಾಗ ಒಂದು ದಿನ ಅಕಸ್ಮಾತ್ ಶಾಮುನಿಗೆ ತಲೆತಿರುಗಿ ಒಂದೆರಡು ಬಾರಿ ವಾಂತಿಯಾಯಿತು ಪ್ರಶ್ನಪತ್ರಿಕೆಗಳನ್ನು ಪೂರ್ತಿ ಮಾಡಲಾಗದೆ ಅವನು ವಿಶ್ರಾಂತಿ ತೆಗೆದುಕೊಳ್ಳಬೇಕಾದ ಸ್ಥಿತಿಯು ಅಕಾರಣದಿಂದ ತಲೆದೋರಿತು. ಶಾಮುನಿಗೆ ಈ ರೀತಿ ಆದುದನ್ನು ಕಂಡು ಕಿಟ್ಟುವು ಸಹಾ ತನ್ನ ಕಾಗದಗಳನ್ನೆಸೆದು ಮಿತ್ರನ ಸಹಾಯಕ್ಕೆ ಬಂದ. ಇದರ ಫಲವಾಗಿ ಪರೀಕ್ಷೆಯಲ್ಲಿ ಇಬ್ಬರೂ ಹಿಂದುಳಿಯಬೇಕಾಯಿತು. ಒಂದು ವರ್ಷ ನಷ್ಟವಾದುದರಿಂದ ಕಿಟ್ಟುವಿಗೆ ದುಃಖವೇನೂ ಆಗಲಿಲ್ಲ ಮಿತ್ರನ ಸಹಾಯಕ್ಕಾಗಿ ಒಂದು ವರ್ಷ ವಿನಾಸಲು ಎಂದುಕೊಂಡ. ಆದರೆ ಇದರ ಪರಿಣಾಮ ಶಾಮುನ ಮನಸ್ಸಿನಮೇಲೆ ಬಲವಾಗಿ ತನ್ನ ಪ್ರಭಾವವನ್ನು ಬೀರಿತು. ತನಗಾಗಿ ಕಿಟ್ಟುವು ಪರೀಕ್ಷೆಯನ್ನು ಕಳೆದುಕೊಂಡನಲ್ಲಾ ಎಂಬ ವ್ಯಥೆಯೊಂದಿಗೆ, ತಾನು ಎಲ್ಲಿಯವರಿವಿಗೆ ಅವನ ಋಣದಲ್ಲಿರಬೇಕೆಂಬ ಪ್ರಶ್ನೆ ಮನಸ್ಸಿನ ಮುಂದೆ ನಿಂತಿತು. ತಾನು ಕಿಟ್ಟುವಿನ ಜತೆಯಲ್ಲೇ ಇದ್ದರೆ ಅವನಿಗೆ ಅಪಕಾರವೇ ಆಗಬಹುದೆಂಬ ಭೀತಿಯು ತಲೆದೋರಿತು. ಇಷ್ಟು ವರ್ಷಗಳೂ ನಿಷ್ಕಲ್ಮಷ ಹೃದಯದಿಂದ ಸಹಾಯಮಾಡಿದ ಮಿತ್ರನಿಗೆ ಈ ರೀತಿ ಪ್ರತ್ಯುಪಕಾರವೇ ಎಂಬ ನೋವು ಶಾಮುನ ಹೃದಯವನ್ನೇ ತಿನ್ನಲಾರಂಭಿಸಿತು. ಪರೀಕ್ಷೆಯು ಹೋದ ಸಮಾಚಾರವನ್ನು ಕೇಳಿ ಕಿಟ್ಟುವಿನ ತಂದೆಯವರೂ

ಮರುಗಿ, ಮುಂದಿನ ವರ್ಷವಾದರೂ ಖಂಡಿತ ತೇರ್ಗಡೆಯಾಗಬೇಕೆಂದು ಒತ್ತಿ ಒತ್ತಿ ಬರೆದಿದ್ದರು. ಅವರ ಪತ್ರದಲ್ಲಿ 'ಕಾಲವು ಎಷ್ಟು ಮುಖ್ಯ' ಎಂಬುದು ಬೋಧಿಸಲ್ಪಟ್ಟಿತ್ತು. ಸ್ವಲ್ಪ ಹುಷಾರಾಗುವವರೊಳಗೆ ಶಾಮನು ತನ್ನ ಮುಂದಿನ ನಿರ್ಧಾರವನ್ನು ಮಾಡಿದ. ಕಾಲೇಜು ಪುನಃ ಪ್ರಾರಂಭವಾದ ನಂತರ ಕಿಟ್ಟುವನ್ನು ಸೇರುವಂತೆ ಪ್ರೋತ್ಸಾಹಿಸಿ, ತಾನು ಯಾವುದಾದರೂ ಕೆಲಸ ಹುಡುಕಿ ಜೀವನೋಪಾಯವನ್ನು ಮಾಡುವುದಾಗಿ ತಿಳಿಸುತ್ತಲೂ, ಕಿಟ್ಟುವು ಆ ಮಾತಿಗೆ ಒಪ್ಪಲಿಲ್ಲ. ಶಾಮನು ಕಾಲೇಜಿಗೆ ಸೇರಲೇ ಬೇಕೆಂದು ಹಟ ಹಿಡಿದ. ಆದರೆ ಶಾಮನ ದೃಢಮನಸ್ಸಿನ ಮುಂದೆ ಕಿಟ್ಟುವಿನ ಆಟ ನಡೆಯದೇ ಹೋಯಿತು. ಒಳ್ಳೆಯ ಮಾತಿನಿಂದಲೂ ಉದಾಹರಣೆಗಳಿಂದಲೂ ತನ್ನ ಕರ್ತವ್ಯವನ್ನು ತಾನು ಮಾಡಲೇ ಬೇಕೆಂದೂ, ಅದಕ್ಕೆ ಅಡ್ಡಿ ಬರಬಾರದೆಂದೂ ಶಾಮನು ಮಿತ್ರನ ಮನಸ್ಸನ್ನು ತಿದ್ದಿ, ತನ್ನ ಇಷ್ಟದಂತೆ ನಡೆಯಲು ಅನುಮತಿಪಡೆದು, ಕಿಟ್ಟುವನ್ನು ಕಾಲೇಜಿಗೆ ಹೋಗಲು ಒಪ್ಪಿಸಿದ. ಯಾವ ಮನಸ್ತಾಪವೂ ಬಾರದಂತೆ ಮಿತ್ರನನ್ನು ಸಮಾಧಾನಪಡಿಸಿದಮೇಲೆ ಶಾಮನಿಗೆ ಎಲ್ಲಿ ಕೆಲಸ ಹುಡುಕ ಬೇಕು, ಯಾವ ಊರಿಗೆ ಹೋಗಬೇಕು ಎಂಬ ಯೋಚನೆಯು ಆವರಿಸಿತು. ಮದರಾಸಿನಲ್ಲೇ ಯಾವುದಾದರೂ ಕೆಲಸ ಹುಡುಕೋಣವೆಂದರೆ, ತನ್ನ ವಿದ್ಯೆಗೆ ದೊರಕಬಹುದಾದ ವೇತನವು ಜೀವನಕ್ಕೆ ಸಾಲುವುದಿಲ್ಲವೆಂಬುದು ಅವನಿಗೆ ತಿಳಿದಿತ್ತು. ಅದೂ ಅಲ್ಲದೆ ಮದರಾಸಿನಲ್ಲೇ ಇದ್ದರೆ ಪುನಃ ಕಿಟ್ಟು ವಿನ ಆದರಕ್ಕೆ ತಪ್ಪದೆ ಒಳಗಾಗಬೇಕೆನ್ನುವುದೂ ಅವನ ಮನಸ್ಸಿಗೆ ಬಂದಿತು. ಆದರೆ ಬೇರೆ ಯಾವ ಊರಿಗೆ ಹೋಗಬೇಕನ್ನುವುದು ಅವನಿಗೆ ಹೊಳೆಯಲಿಲ್ಲ. ಯೋಚನೆಯಲ್ಲೇ ಎರಡು ಮೂರು ದಿನಗಳು ಕಳೆದುಹೋದವು. ಈ ಅವಧಿ ಯಲ್ಲಿ ತಾನು ಕಾಣುತ್ತಿದ್ದ ಪ್ರಪಂಚವನ್ನೂ ಅದರ ವ್ಯವಹಾರವನ್ನೂ ಚೆನ್ನಾಗಿ ವಿಮರ್ಶಿಸಿದ. ಕೇವಲ ಜೀವನೋಪಾಯಕ್ಕಾಗಿ ದುಡಿಯುವುದೊಂದೇ ಜನ್ಮದ ಸಾರ್ಥಕ್ಯವೇ ಎಂಬ ಪ್ರಶ್ನೆಯನ್ನು ತನ್ನ ಮನಸ್ಸಿಗೆ ಅನೇಕಸಾರಿ ಹಾಕಿದ. ಮನಸ್ಸು ಸಮರ್ಪಕವಾದ ಉತ್ತರವನ್ನು ಕೊಡಲಾರದೆ ಹೋಯಿತು. "ಮೊದಲು ಜೀವನೋಪಾಯ, ನಂತರ ಧ್ಯೇಯ" ಎಂಬ ಸಮಾಧಾನವನ್ನು ಮಾತ್ರ ಶಾಮನ ಮನಸ್ಸು ತಿಳಿಯಹೇಳಿತು.

ಕಾಲೇಜು ವಿದ್ಯಾರ್ಥಿಗಳು ಕೆಲವು ಪ್ರಕೃತಿ ವಿಚಿತ್ರಗಳನ್ನೂ, ವ್ಯಾಪಾರದ ಸಂಸ್ಥೆಗಳನ್ನೂ ನೋಡಿ ಅನುಭವಪಡೆಯಲು ಪ್ರವಾಸ ಕೈಕೊಂಡರು. ಕಿಟ್ಟುವೂ ಅವರೊಡನೆ ಹೋಗಬೇಕಾಗಿದ್ದುದರಿಂದ, ಮುಂದಿನ ಮಾರ್ಗವನ್ನು ನಿರ್ಧರಿಸದೆ ಇನ್ನೂ ಯೋಚನೆಯಲ್ಲೇ ಚಿಂತಿಸುತ್ತಿದ್ದ ಶಾಮುನನ್ನು ತನ್ನೊಡನೆ ಬರುವಂತೆ ಬಲವಂತಮಾಡಿದ. ಶಾಮುನಿಗೆ ಅವರೊಡನೆ ಹೋಗುವುದು ಸೂಕ್ತವೆಂದೂ, ಯಾವುದಾದರೂ ಊರಿನಲ್ಲಿ ಸಾಧ್ಯವಾದರೆ ಕೆಲಸವನ್ನು ಹುಡುಕಬೇಕೆಂದೂ ತೋರಿತು. ಮರುಮಾತಾಡದೆ ಬರಲು ಒಪ್ಪಿದ. ವಿದ್ಯಾರ್ಥಿಗಳು ಮದರಾಸಿನಿಂದ ಹೊರಟು, ಬೆಂಗಳೂರು, ಮೈಸೂರು ಕಡೆ ಹೋಗಿ, ನಂತರ ಗೋವಾ, ಮಂಗಳೂರು ಪ್ರಾಂತಗಳಲ್ಲಿನ ವಾಣಿಜ್ಯ ಸಂಸ್ಥೆಗಳನ್ನು ನೋಡಬೇಕೆಂದು ನಿರ್ಧರಿಸಿದ್ದರು. ಒಂದು ವಾರದನಂತರ ೨೫ ಜನ ವಿದ್ಯಾರ್ಥಿಗಳು ಒಬ್ಬ ಉಪಾಧ್ಯಾಯರ ಮೇಲ್ವಿಚಾರಣೆಯಲ್ಲಿ ಪ್ರವಾಸವನ್ನು ಕೈಕೊಂಡರು. ಜ್ಞಾನ ಬಂದಮೇಲೆ ಮದರಾಸನ್ನು ಬಿಟ್ಟರೆ ಬೇರೆ ಯಾವ ಪಟ್ಟಣವನ್ನೂ ನೋಡದ ಶಾಮುನಿಗೆ ಬೆಂಗಳೂರು, ಮೈಸೂರು ಪಟ್ಟಣಗಳು ಬಹು ಕುತೂಹಲವನ್ನುಂಟುಮಾಡಿದವು ಅಲ್ಲಿನ ಸೊಬಗು, ಸಂಸ್ಥೆಗಳ ನಡೆವಳಿಕೆ ಇವುಗಳನ್ನು ದೂರದೃಷ್ಟಿಯಿಂದ ನೋಡಿದಮೇಲೆ ಜನರು ಅತಿ ಸುಖಿಗಳೆಂದು ಭಾವಿಸಿದ. ಆದರ ಇದ್ದ ಒಂದೆರಡು ದಿನಗಳಲ್ಲಿ ಪಟ್ಟಣಗಳ ಬಡವರ ಸ್ಥಿತಿಯು, ಅವರ ಜನಸಂಖ್ಯೆಯು ತಿಳಿದನಂತರ, ಶಾಮುನಿಗುಂಟಾದ ಮನೋವ್ಯಥೆ ಅಷ್ಟಿಷ್ಟಲ್ಲ ಎಲ್ಲಿ ಪ್ರಯತ್ನಿಸಿದರೂ ಈ ಊರುಗಳಲ್ಲಿ ಶಾಮುನ ಮನ ಒಪ್ಪುವ ಕಲಸವ್ಯಾವುದೂ ಸಿಗಲಿಲ್ಲ. ಕಿಟ್ಟುವು ಮಾತ್ರ ಯೋಚಿಸಬೇಡವೆಂದು ಮಿತ್ರನಿಗೆ ಪದೇ ಪದೇ ಹೇಳುತ್ತಲೇ ಅವನನ್ನು ಸಂತಸಪಡಿಸುವ ಮಾರ್ಗಗಳನ್ನು ಹುಡುಕುತ್ತಿದ್ದ. ಮೂರು ದಿನಗಳ ನಂತರ ವಿದ್ಯಾರ್ಥಿಗಳು ಮಂಗಳೂರಿಗೆ ಹೋಗುವ ಹೊಗೆಬಂಡಿಯನ್ನು ಹತ್ತಿದರು.

೪

ಶಾಮುನ ಪ್ರಯತ್ನ ಮಂಗಳೂರಿನಲ್ಲಿ ಯಶಸ್ವಿಯಾಯಿತು. ಊರನ್ನು ಸೇರಿದ ಮೊದಲನೆಯ ದಿನ ಮಿತ್ರರೊಂದಿಗೆ ಅನೇಕ ಸ್ಥಳಗಳನ್ನು ನೋಡಿ ಬಂದು, ಮಾರನೆಯ ದಿನ ಯಾವುದಾದರೂ ಕೆಲಸ ಸಿಗುವುದೇನೋ ಎಂದು

ಪರಿಚಿತಿಯಾಗಿದ್ದ ಒಬ್ಬ ಶಾಲಾ ಮಾಸ್ತರನ್ನು ವಿಚಾರಿಸಿದ. ಅವರು ತಕ್ಷಣ ತಮ್ಮಯ್ಯನವರ ಹೆಸರನ್ನು ಸೂಚಿಸಿದರು. ಮಧ್ಯಾಹ್ನ ಊಟವಾದನಂತರ ಕಿಟ್ಟುವಿನೊಡನೆ ತಮ್ಮಯ್ಯನವರ ಕಛೇರಿಗೆ ಹೋಗಿ ಅವರನ್ನು ಕಂಡು ತನಗೆ ಯಾವುದಾದರೂ ಕೆಲಸ ಬೇಕಾಗಿದೆಯೆಂದು ಕೇಳಿದ. ಶಾಮನ ಮುಖವನ್ನೂ, ನಡಿಗೆ ತೊಡಿಗೆಗಳ ರೀತಿಯನ್ನೂ ಕಂಡು, ತಮ್ಮಯ್ಯನವರು ಇಷ್ಟಪಟ್ಟರೆ ಅವರ ವಾಣಿಜ್ಯ ಸಂಸ್ಥೆಯಲ್ಲೇ ಒಂದು ಕೆಲಸ ಕೊಡುವುದಾಗಿ ತಿಳಿಸಿದರು. ಮೊದಲನೆಯ ಭೆಟ್ಟಿಯಿಂದ ತೃಪ್ತಿಹೊಂದಿದ್ದ ಶಾಮನು ತಮ್ಮಯ್ಯನವರ ಬಳಿ ಕೆಲಸಮಾಡಲು ಸಮ್ಮತಿಸಿದ. ಮಾರನೆಯ ದಿನ ದಿಂದಲೆ ತನ್ನ ಹೊಸ ಉದ್ಯಮಕ್ಕೆ ಬರಬೇಕೆಂದು ಗೊತ್ತಾಯಿತು. ಶಾಮನು ಮಂಗಳೂರಿನಲ್ಲೇ ಉಳಿಯಬೇಕೆಂದು ನಿರ್ಧರವಾದುದನ್ನು ಕಂಡ ಕಿಟ್ಟುವು ಮಿತ್ರನನ್ನು ಅಗಲಬೇಕಾಯಿತಲ್ಲಾ ಎಂದು ಪೇಚಾಡಿದ—ಮತ್ತು ಆಗಾಗ ಕಾಗದಗಳನ್ನು ತಪ್ಪದೆ ಬರೆಯುತ್ತಿರಬೇಕೆಂದು ಹೇಳಿ, ಶಾಮನಿಂದ ಮಾತು ತೆಗೆದುಕೊಂಡ ಎರಡು ದಿನಗಳು ಕಳೆದಮೇಲೆ ಮದರಾಸಿನ ವಿದ್ಯಾರ್ಥಿ ವೃಂದವು ಬಂದ ಕೆಲಸವನ್ನು ಪೂರೈಸಿಕೊಂಡು ಹಿಂದಿರುಗಿತು.

ತಿಳಿಸಿದ್ದ ಕಾಲಕ್ಕೆ ಸರಿಯಾಗಿ ಶಾಮನು ತಮ್ಮಯ್ಯನವರ ಬಳಿ ಹೊಸ ಕೆಲಸಕ್ಕೆ ಹಾಜರಾದ. ಹುಡುಗನ ವಿನಯ, ಗಂಭೀರ, ಮುಂತಾದ ಗುಣಗಳು ತಮ್ಮಯ್ಯನವರ ಮನಸ್ಸಿನಮೇಲೆ ಸದಭಿಪ್ರಾಯವನ್ನುಂಟುಮಾಡಿದ್ದವು. ಮಂಗಳೂರು ತನಗೆ ಅಪರಿಚಿತ ಸ್ಥಳವೆಂದೂ, ತನ್ನವರಾರೂ ಇಲ್ಲವೆಂದೂ ಶಾಮನು ತಿಳಿಸಿದಮೇಲೆ ತಮ್ಮಯ್ಯನವರು ಅವನ ಜಾತಿ, ಕುಲ ಮುಂತಾದ ವಿಷಯಗಳನ್ನು ಕೂಲಂಕಷವಾಗಿ ವಿಚಾರಿಸಿ, ಸದ್ಯಕ್ಕೆ ತಮ್ಮ ಬಂಗಲೆಯಲ್ಲೇ ಊಟಮಾಡಿ, ಕೆಲಸದಮೇಲೆ ಹೋಗಬಹುದೆಂದೂ, ಉಳಿದುಕೊಳ್ಳಲು ತಮ್ಮ ಮನೆಯಲ್ಲೇ ಸ್ಥಳವಿರುವುದೆಂದೂ ತಿಳಿಸಿದರು. ಶಾಮನಿಗೆ ತಮ್ಮಯ್ಯ ನವರ ಗುಣವನ್ನೂ, ಔದಾರ್ಯವನ್ನೂ ಕಂಡು ಅತ್ಯಾಶ್ಚರ್ಯವಾಯಿತು.

ತಮ್ಮಯ್ಯನವರು ಹೆಸರಿಗೆ ಮಾತ್ರ ಸಾಹುಕಾರರಾಗಿರಲಿಲ್ಲ ಅವರು ಗಳಿಸಿಟ್ಟುಕೊಂಡಿದ್ದ ಅಪಾರವಾದ ಆಸ್ತಿಯನ್ನು ಕಂಡೇ ಜನರು ಅವರನ್ನು ಸಾಹುಕಾರರೆಂದು ಕರೆಯುತ್ತಿದ್ದರು. ತಮ್ಮಯ್ಯನವರಿಗೆ ಶಾಲಾ ವ್ಯಾಸಂಗದ ವಿದ್ಯೆ ಹೆಚ್ಚಾಗಿರಲಿಲ್ಲವಾದರೂ ಪ್ರಪಂಚದ ವ್ಯವಹಾರಜ್ಞಾನ ಚೆನ್ನಾಗಿ ಕರಗತ

ವಾಗಿತ್ತು. ಅವರು ಮಂಗಳೂರಿಗೆ ಬಂದು ನೆಲಸಿ ಸುಮಾರು ೨೦–೩೦ ವರ್ಷಗಳಾಗಿದ್ದಿರಬಹುದು. ಅಷ್ಟರಲ್ಲಿ ಅನೇಕ ಬಂಗಲೆಗಳನ್ನೂ, ವ್ಯಾಪಾರದ ಸಂಸ್ಥೆಗಳನ್ನೂ ಕಟ್ಟಿ ಊರಿನ ಗಣ್ಯ ಮನುಷ್ಯರಲ್ಲೊಬ್ಬರಾಗಿದ್ದರು. ಅವರ ಕೈಕಳಗೆ ಸುಮಾರು ೩೦೦ ಜನ ಕೂಲಿಯವರೂ, ೫೦-೬೦ ಜನ ಗುಮಾಸ್ತೆಯರೂ ಕೆಲಸಮಾಡುತ್ತಿದ್ದರು. ಇದಲ್ಲದೆ ಅವರಿಗೆ ಮಾರನಹಳ್ಳಿಯಲ್ಲಿ ಪಿತ್ರಾರ್ಜಿತವಾದ ಆಸ್ತಿ ಯಥೇಚ್ಛವಾಗಿತ್ತು. ಯಾವುದೋ ಸಂತೋಷದ ಸಮಯದಲ್ಲಿದ್ದಾಗ ಕೆಲಸಬೇಕೆಂದು ಶಾಮನು ಹೋಗಿ ಕೇಳಿದ. ಹುಡುಗನು ಬುದ್ಧಿವಂತನೆಂದು ಮುಖಲಕ್ಷಣದಿಂದ ಗ್ರಹಿಸಿ, ತಕ್ಷಣ ತಮ್ಮ ಬಳಿ ಕೆಲಸ ಮಾಡಬೇಕಾಗಿ ಹೇಳಿದರು. ಶಾಮನು ಬ್ರಾಹ್ಮಣನೆಂದೂ, ತಂದೆತಾಯಿಯಿಲ್ಲದ ಅನಾಥನೆಂದೂ ತಿಳಿದಮೇಲಂತೂ ತಮ್ಮಯ್ಯನವರ ಹೃದಯ ಮರುಕಹೊಂದಿ, ಅವನನ್ನು ತಮ್ಮ ಮನೆಯಲ್ಲೇ ಇರಬಹುದೆಂದು ಸೂಚಿಸಿದ್ದರು. ಶಾಮನು ಬಂದು ಕೆಲಸದಮೇಲೆ ಹಾಜರಾದ ದಿನ ತಮ್ಮಯ್ಯನವರು ಅವನಿಗೆ ಯಾವ ಕೆಲಸ ಮಾಡಬೇಕೆಂಬುದನ್ನು ವಿಶದವಾಗಿ ತಿಳಿಯ ಹೇಳಿ, ಸಂಜೆ ತಮ್ಮೊಡನೆ ಮನೆಗೆ ಕರೆದುಕೊಂಡುಹೋದರು.

ತಮ್ಮಯ್ಯನವರು ವ್ಯಾಪಾರದಲ್ಲಿ ಯಶಸ್ಸನ್ನೂ ಹಣವನ್ನೂ ಗಳಿಸಿ, ಸುಖದ ಹಾದಿಯನ್ನು ಸಂಪೂರ್ಣವಾಗಿ ಹಿಡಿದಿದ್ದಾಗಲೇ ಅವರ ಹೆಂಡತಿ ಇಬ್ಬರು ಮಕ್ಕಳನ್ನು ಬಿಟ್ಟು ತೀರಿಹೋದರು. ಆಗ ಕಮಲಳಿಗೆ ಇನ್ನೂ ೧೦ ವರ್ಷ ಮಾತ್ರ. ಆಕೆಯ ಅಣ್ಣನೇ ರಾಮು. ರಾಮುವಿಗೆ ಕೇವಲ ೧೩ ವರ್ಷಗಳೇ ಆಗಿದ್ದರೂ, ತನ್ನ ತಾಯಿಯು ಈ ಲೋಕವನ್ನು ತ್ಯಜಿಸಿದುದು ಅವನಿಗೆ ಒಂದು ದೊಡ್ಡ ಕೊರಗನ್ನೂ, ಯೋಚನೆಯನ್ನೂ ಉಂಟುಮಾಡಿತು. ಇನ್ನು ತಂದೆಯ ಮನೆಯಲ್ಲಿ ತನಗೆ ಸ್ಥಾನವಿಲ್ಲವೆಂದು ಅಂದೇ ಅವನು ಭಾವಿಸಿದ. ಕಮಲಳ ತಾಯಿ ಸತ್ತ ಮೂರು ವರ್ಷಗಳಲ್ಲೇ ತಮ್ಮಯ್ಯನವರು ಸೀತಮ್ಮನನ್ನು ಮದುವೆಯಾದರು. ಇದ್ದ ಎರಡು ಮಕ್ಕಳಿಗೆ ಸರಿಯಾದ ಮಾರ್ಗದರ್ಶಕರಿಲ್ಲದೆ, ತಬ್ಬಲಿಯರಂತ ಬೆಳೆಯಬೇಕಲ್ಲಾ ಎಂಬ ಉದ್ದೇಶದಿಂದಲೇ ಎರಡನೇ ಸಂಬಂಧ ಮಾಡಿದುದೂ ಎಂದು ಅನೇಕ ವೇಳೆ ತಮ್ಮ ಸ್ನೇಹಿತರೊಂದಿಗೆ ಹೇಳಕೊಂಡಿದ್ದರು. ಸೀತಮ್ಮ ಈಗಿನ ಕಾಲದ ಹೆಣ್ಣು. ತಮ್ಮಯ್ಯನವರಲ್ಲಿದ್ದ ಅಪಾರ ಸಂಪತ್ತು, ಸಮಾಜದಲ್ಲಿನ

ಅವರ ಗಣ್ಯಸ್ಥಾನಗಳನ್ನು ಕಂಡು ಮನಸೋತು, ಮುಂದೆ ಸುಖವಾಗಿರಬಹು ದಲ್ಲಾ ಎಂದೇ ಆಕೆ ಎರಡನೇ ಮದುವೆಗೆ ಒಪ್ಪಿದ್ದು. ಸೀತಮ್ಮ ಮನೆಗೆ ಬಂದ ಕೆಲವು ದಿವಸ ಯಾವ ವಿಶೇಷವೂ ಜರುಗದಿದ್ದರೂ, ರಾಮು ಮತ್ತು ಕಮಲಳಿಗೆ ಮಾತ್ರ ಅನುಮಾನವು ಬಲವಾಯಿತು. ಇನ್ನೂ ೧೦-೧೩ ವರ್ಷ ದವರಾಗಿದ್ದಾಗಲೇ ಅವರಿಬ್ಬರೂ ಮಾತಾಡಿಕೊಂಡು, ತಾಯಿ ಇಲ್ಲದುದರಿಂದ ಕಷ್ಟಸುಖದಲ್ಲಿ ಅಣ್ಣ ತಂಗಿಯರು ಒಬ್ಬರನ್ನೊಬ್ಬರು ಕೈಬಿಡಬಾರದೆಂದೂ, ತಮ್ಮ ತಾಯಿಯು ಅವರಿಬ್ಬರಮೇಲೆ ಎಷ್ಟು ಮಮತೆಯನ್ನಿಟ್ಟಿದ್ದಳೋ ಅಷ್ಟನ್ನೇ ಒಬ್ಬರಿಗೊಬ್ಬರು ಹಂಚಿಕೊಂಡಿರಬೇಕೆಂದೂ ನಿರ್ಧರಿಸಿದರು.

ಕೆಲಸದ ಬಿರುಸಿನಲ್ಲಿ ತಮ್ಮಯ್ಯನವರಿಗೆ ಮನೆಯ ಕಡೆ ಹೆಚ್ಚು ಗಮನ ಕೊಡಲು ಸಾಧ್ಯವಾಗುತ್ತಿರಲಿಲ್ಲ. ಮನೆಗೆಲ್ಲಾ ಸೀತಮ್ಮನವರೇ ಅಧಿಕಾರಿ ಗಳಾಗಿದ್ದರು. ಮಕ್ಕಳನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದಂತೆ ಭಾವಿಸಿ, ಪ್ರೀತಿಸಿ, ಬೆಳೆಸುವೆನೆಂದು ಒಪ್ಪಿ ಮನೆಗೆ ಬಂದ ಆಕೆ ಕೆಲವು ತಿಂಗಳಿನಲ್ಲೇ ಅಕಾರಣವಾಗಿ ರಾಮುವಿನಮೇಲೆ ವಿಷ ಕಾರಲು ಪ್ರಾರಂಭಿಸಿದರು. ರಾಮು ವಿನ ನಡೆ ನುಡಿಯೇ ಸೀತಮ್ಮನವರಿಗೆ ಸರಿದೋರುತ್ತಿರಲಿಲ್ಲ. ಅವನು ಕುಳಿತರೆ ತಪ್ಪು, ನಿಂತರೆ ಸರಿಯಲ್ಲಾ ಎಂಬುದೇ ಆಕೆಯ ದಿನಚರಿಯಾಯಿತು. ಪ್ರತಿನಿತ್ಯವೂ ಕೆಲಸಮಾಡಿ ದಣಿದು ಮನೆಗೆ ಬಂದೊಡನೆ ತಮ್ಮಯ್ಯನವರು ರಾಮುವಿನ ತುಂಟತನವನ್ನು ಸೀತಮ್ಮನವರ ಬಾಯಿಂದ ಕೇಳಲು ಮೊದ ಲಾಯಿತು.

ತಮ್ಮಯ್ಯನವರು ಶಾಮುನನ್ನು ಮನೆಗೆ ಕರೆದುಕೊಂಡು ಹೋಗಿದ್ದು ಸೀತಮ್ಮನವರಿಗೆ ಸಮರ್ಪಕವಾಗಿ ಕಾಣಲಿಲ್ಲ. ಆದರೂ ಗಂಡನ ಇಷ್ಟಕ್ಕೆ ಅತಿವಿರುದ್ಧವಾಗಿ ನಡೆಯುವಷ್ಟು ಧೈರ್ಯ ಇನ್ನೂ ಬಂದಿರಲಿಲ್ಲವಾದುದ ರಿಂದ, ಆಕೆಯು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಸುಮ್ಮನಿದ್ದರು. ತಮ್ಮಯ್ಯನವರು ಶಾಮುನ ವಿಷಯವಾಗಿ ರಾಮುವಿಗೆ ತಿಳಿಸಿ, ಬೇರೆ ವಾಸಸ್ಥಳ ಸಿಗುವವರಿವಿಗೂ ಅವನು ತಮ್ಮ ಮನೆಯಲ್ಲಿರುವುದಾಗಿ ಹೇಳಿದರು. ಶಾಮು ನನ್ನು ನೋಡಿದೊಡನೆ ರಾಮುವಿಗೆ ಸಂತೋಷವೇ ಆಯಿತು. ಮಾತಾಡಲು, ಹೊತ್ತು ಕಳೆಯಲು ಒಬ್ಬರು ಸಿಕ್ಕಿದರಲ್ಲಾ ಎಂಬುದೇ ಅವನ ಸಂತಸಕ್ಕೆ ಕಾರಣ. ಊಟವಾದನಂತರ ಶಾಮುನನ್ನು ತನ್ನ ಕೊಠಡಿಗೆ ಕರೆದುಕೊಂಡು

ಹೋಗಿ ಅವನ ವಿಷಯವನ್ನೆಲ್ಲಾ ವಿಶದವಾಗಿ ತಿಳಿದುಕೊಂಡ. ಶಾಮನು ತನಗಿಂತಲೂ ಹೆಚ್ಚು ಓದಿದವನೆಂದು ತಿಳಿದಮೇಲೆ ಪಾಟವನ್ನು ಸಹಾ ಹೇಳಿಸಿಕೊಳ್ಳಬಹುದೆಂದು ಅವನಿಗನ್ನಿಸಿತು. ತಮ್ಮಯ್ಯನವರ ಮನೆ ಸೇರಿದ ಮೇಲೆ ಶಾಮನಿಗೆ ಅವರ ಭೇಟಿ ಹೆಚ್ಚು ಆಗುತ್ತಿರಲಿಲ್ಲ. ಬೆಳಗ್ಗೆ ಎದ್ದು ತನ್ನ ಕೆಲಸದಮೇಲೆ ಹೋಗಿ ಮನೆಗೆ ಬರುವಷ್ಟರಲ್ಲಿ ತಮ್ಮಯ್ಯನವರು ಊಟ ಮಾಡಿಕೊಂಡು ಹೊರಟುಹೋಗಿರುತ್ತಿದ್ದರು. ರಾತ್ರಿ ಶಾಮನು ಹಿಂದಿರುಗುವ ವೇಳೆಗೆ ತಮ್ಮಯ್ಯನವರು ಬಂದಿರುತ್ತಲೇ ಇರಲಿಲ್ಲ. ಸಿಕ್ಕಿದ ಸ್ವಲ್ಪ ಸಮಯ ದಲ್ಲೇ ರಾಮು ಶಾಮನ ಗೆಳೆತನ ಚೆನ್ನಾಗಿ ಬೆಳೆಯುತ್ತಾ ಬಂದಿತು. ಯಾರೊಡ ನೆಯೂ ಹೆಚ್ಚು ಮಾತಾಡದೆ, ಯಾವ ವಿಷಯಕ್ಕೂ ಅತಿಯಾಗಿ ಗಮನ ಕೊಡದೆ, ಎಲ್ಲರಿಗೂ ಬಚ್ಚುಮೆಚ್ಚಾಗಿರುವಂತೆ ಪ್ರಯತ್ನಿಸುತ್ತಾ ಶಾಮನು ಆ ಮನೆಯಲ್ಲಿ ಇರತೊಡಗಿದ. ಆದರೂ ಅವನು ಬೇರೆ ಕೊಠಡಿಯನ್ನು ಹುಡು ಕುವ ಪ್ರಯತ್ನ ಕಮ್ಮಿಮಾಡಿರಲಿಲ್ಲ ಶಾಮನ ಕೆಲಸವನ್ನು ನೋಡಿ ಸಮಾ ಧಾನಪಟ್ಟಿದ್ದ ತಮ್ಮಯ್ಯನವರು ಮೊದಲನೆಯ ತಿಂಗಳು ಅವನ ಕೈಗೆ ೨೫ ರೂಪಾಯಿಗಳನ್ನು ಕೊಟ್ಟರು. ಊಟ, ತಿಂಡಿ ಎಲ್ಲಾ ಅವರ ಮನೆಯಲ್ಲೇ ನಡೆದಿತ್ತು. ಎರಡನೆಯ ತಿಂಗಳಿಂದ ಅವನಿಗೆ ೩೫ ಕೊಡಲಾರಂಭಿಸಿದರು. ಮನೆಗಳ ಅಭಾವದಿಂದಲೂ, ರಾಮುವಿನ ಬಲವಂತದಿಂದಲೂ ಶಾಮನು ಮಂಗಳೂರಿಗೆ ಬಂದ ೮ ತಿಂಗಳಾದರೂ ತಮ್ಮಯ್ಯನವರ ಮನೆಯನ್ನು ಬಿಡಲಾಗಲಿಲ್ಲ.

ರಾಮುವು ತನ್ನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಪ್ರೌಢಶಾಲೆಯನ್ನು ಸೇರಿದ. ಕಮಲಳಿಗೂ ೧೩ ವರ್ಷಗಳು ತುಂಬಿತು. ಕಮಲಳಿಗೆ ತನ್ನ ಚಿಕ್ಕಮ್ಮನ ವರ್ತನೆಯು ಸರಿಕಾಣುತ್ತಿರಲಿಲ್ಲ ಬಾರದಿದ್ದರೂ, ಆಕೆಯು ಬೆಳೆದಂತೆಲ್ಲಾ ಸೀತಮ್ಮನವರಲ್ಲಿ ದೂರವಾದ ಆಶೆಯೊಂದು ಮೊಳಕ ಹಾಕಿತು. ತನ್ನ ತಮ್ಮನಿಗೇ ಕಮಲಳನ್ನು ಯಾಕೆ ತಂದುಕೊಳ್ಳಬಾರದು ಎಂದು ಅನೇಕ ಸಾರಿ ಅವರು ತಮ್ಮ ಮನಸ್ಸಿನಲ್ಲಿಯೇ ಯೋಚಿಸಿದರು. ಈ ಯೋಚನೆಯಲ್ಲಿ ಒಂದೆರಡು ವರ್ಷಗಳು ತಳ್ಳಿಹೋಯಿತು. ರಾಮುವು ತನ್ನ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿ ಕಾಲೇಜಿಗೆ ಸೇರಿದ. ಮನೆಯಲ್ಲಿ ಎಷ್ಟು ಅವಸ್ಥೆ ಯಾದರೂ ಕಮಲಳು ರಾಮುವಿನ ಸಮಾಧಾನ ಮಾತುಗಳಿಂದ ಧೈರ್ಯ

ತುಂದುಕೊಳ್ಳುತ್ತಿದ್ದಳು. ಗೃಹಕೃತ್ಯದ ವಿಷಯದಲ್ಲಿ ಕಿವಿಗೊಡದಿದ್ದರೂ ಶಾಮನಿಗೆ ಮನೆಯಲ್ಲಿ ನಡೆಯುವ ಎಲ್ಲಾ ವಿಷಯಗಳೂ ರಾಮುವಿನಿಂದ ತಿಳದಿತ್ತು. ಅಣ್ಣ ತಂಗಿಯರ ಸ್ಥಿತಿಗಾಗಿ ಅವನು ಅನೇಕವೇಳೆ ಮರುಗಿದ್ದ. ಕಮಲಳ ಇಷ್ಟಕ್ಕೆ ವಿರುದ್ಧವಾಗಿ ಅವಳನ್ನು ತಮ್ಮ ಸಹೋದರನಿಗೆ ವಿವಾಹ ಮಾಡಿಕೊಡಬೇಕೆಂದು ಸೀತಮ್ಮನವರು ಹವಣಿಸುತ್ತಿರುವುದನ್ನು ತಿಳಿದ ಮೇಲಂತೂ ಶಾಮನ ಹೃದಯವು ಕಲಕಿಹೋಯಿತು.

ಸೀತಮ್ಮನವರ ತಮ್ಮ ರಘು. ಮಂಗಳೂರಿನ ಉತ್ತರಕ್ಕೆ ೨೩ ಮೈಲಿ ದೂರವಿದ್ದ ಹಳ್ಳಿಯೊಂದರಲ್ಲಿ ವಾಸವಾಗಿದ್ದ. ಪ್ರಾಥಮಿಕ ವಿದ್ಯಾಭ್ಯಾಸ ವನ್ನು ಬಹು ಕಷ್ಟದಿಂದ ಮುಗಿಸಿದ್ದರೂ ರಘುವು ಮಾತ್ರ ಅತ್ಯಾಧುನಿಕ ವ್ಯಕ್ತಿಯಾಗಿದ್ದನೆನ್ನಬಹುದು. ಅವನ ಜೀವನವು ಹೇಗೆ ಸಾಗುತ್ತಿತ್ತು, ಯಾವ ಉದ್ಯೋಗವನ್ನು ಮಾಡುತ್ತಿದ್ದನೆನ್ನುವುದು ಸೀತಮ್ಮನವರಿಗೂ ಸರಿಯಾಗಿ ಗೊತ್ತಿರಲಿಲ್ಲ. ಆದರೆ, ರಘುವಿನ ಕೈಲಿ ಯಾವಾಗಲೂ ಹಣ ಓಡಾಡುತ್ತಿತ್ತು. ಅವನೊಬ್ಬ ಜೂಜುಗಾರ ಎಂದು ಕೆಲವರು ಪಿಸುಗುಟ್ಟು ತ್ತಿದ್ದರು. ಅಂತೂ ಆ ಹಳ್ಳಿಯಲ್ಲಿ ರಘುವನ್ನು ಮಾತಾಡಿಸುವ ಧೈರ್ಯ ಯಾರಿಗೂ ಇರಲಿಲ್ಲ. ಅವನನ್ನು ಕೆಲವು ದಿನಗಳಾದರೂ ತಮ್ಮ ಮನೆಗೆ ಬರುವಂತೆ ಮಾಡಿ, ಕಮಲಳಿಗೂ ಅವನಿಗೂ ವಿಶ್ವಾಸ ಬೆಳೆಯಲು ಮಾರ್ಗ ಕಲ್ಪಿಸಿಕೊಡಬೇಕೆಂದು ಸೀತಮ್ಮನವರು ನಿರ್ಧರಿಸಿ ಕಾಗದ ಬರೆದರು. ಕಾಗದ ವನ್ನು ಕಂಡ ಮೂರನೆಯ ದಿನವೇ ರಘುವು ಸಲಕ್ಷಣನಾಗಿ ಅಕ್ಕನ ಮನೆ ಯನ್ನು ಪ್ರವೇಶಿಸಿದ ಕೋಣೆಯಲ್ಲಿ ಕುಳಿತಿದ್ದ ಶಾಮನು ಮೇಲಕ್ಕೆದ್ದು ಕಿಟಕಿಯಿಂದ ನೋಡಿ "ಯಾರೋ ನಿಮ್ಮ ಮನೆಗೆ ಬಂದರಲ್ಲೋ ರಾಮು" ಎಂದ. ಯಾರಿರಬಹುದು ಎನ್ನುವುದು ರಾಮುವಿಗೂ ಕುತೂಹಲವನ್ನು ಉಂಟುಮಾಡಿತು. ತಾನೂ ಕಿಟಕಿಯ ಬಳಿ ಬಂದು, ಒಳಗೆ ಬರುತ್ತಿದ್ದ ವ್ಯಕ್ತಿ ಯನ್ನು ನೋಡಿ "ಇವನೋ ಸರಿ ನನ್ನ ಚಿಕ್ಕಮ್ಮನ ತಮ್ಮ—ರಘು. ಇನ್ನು ಏನೇನು ಮಸಲತ್ತು ನಡೆಯುತ್ತಿದೆಯೋ" ಎಂದು ಶಾಮನಿಗೆ ಉತ್ತರ ಹೇಳಲು, ಇದರಲ್ಲಿ ಮಸಲತ್ತು ಏನಿದೆ ಎನ್ನುವುದೇ ಶಾಮನಿಗೆ ಹೊಳೆಯ ಲಿಲ್ಲ. ಶಾಮುವನ್ನೇ ಪುನಃ ಪ್ರಶ್ನಿಸಿದ. "ಅವನೂ ಈ ಊರಿಗೆ ಬಹಳ ದಿನ

ಗಳಿಂದಲೂ ಬಂದಿರಲಿಲ್ಲ. ಈಗ ಯಾತಕ್ಕೆ ಬಂದನೋ ಎಂಬ ಅನುಮಾನ ದಿಂದ ಹಾಗೆ ಹೇಳಿದೆ" ಎಂದು ರಾಮು ಸಮಾಧಾನಪಡಿಸಿದ.

ಒಳಗೆ ಬಂದ ರಘುವನ್ನು ಸೀತಮ್ಮನವರು ಸಂತೋಷದಿಂದ ಆದರಿಸಿದರು. ನಡುಮನೆಗೆ ಕರೆದುಕೊಂಡುಹೋಗಿ ಕುರ್ಚಿಯಮೇಲೆ ಕೂರುವಂತೆ ಹೇಳಿ ಒಂದು ಬಟ್ಟಲು ಹಾಲನ್ನು ತಂದಿಟ್ಟು, ಸರಸರನೆ ರಾಮುವಿದ್ದ ಸ್ಥಳಕ್ಕೆ ಬಂದು "ರಘು ಬಂದಿದ್ದಾನೆ. ಮಾತಾಡಿಸಬೇಕೆನ್ನುವುದೂ ತಿಳಿಯುವುದಿಲ್ಲವೇ? ಮನೆಗೆ ಯಾರಾದರೂ ಬಂದರೆ ಇದೇನೆ ಮರ್ಯಾದೆ" ಎಂದು ಟೀಕಿಸಿದರು. ರಾಮುವಿಗೆ ಅವನೊಡನೆ ಯಾವ ಮಾತೂ ಆಡಲಿಷ್ಟವಿರಲಿಲ್ಲ. ಆದರೂ "ಈ ಸಣ್ಣ ವಿಷಯಕ್ಕೆ ಯಾಕೆ ಹಿಂದೆಗೆಯಬೇಕೇದು" ಶಾಮನು ತಿಳಿಸಿದಮೇಲೆ, ಇಬ್ಬರೂ ರಘು ಕುಳಿತಿದ್ದ ಸ್ಥಳಕ್ಕೆ ಬಂದರು. ರಘುವಿಗೆ ಸುಮಾರು ೨೪ ವಯಸ್ಸು. ತಲೆಯ ತುಂಬಾ ಗುಂಗುರು ಕೂದಲು, ಸುಂದರವಾದ ಮುಖ—ಕಪ್ಪಿಲ್ಲದಂತೆ ಬಟ್ಟೆಯನ್ನು ಹಾಕಿಕೊಂಡಿದ್ದ. ಆದರೆ ಮುಖದಲ್ಲಿ ವಿದ್ಯೆಯ ಕಳೆ ಸ್ವಲ್ಪವೂ ಇಲ್ಲವೆನ್ನುವುದು ಅವನನ್ನು ನೋಡಿದೊಡನೆ ಶಾಮನಿಗೆ ತಿಳಿಯದಿರಲಿಲ್ಲ ಈ ರೀತಿಯ ನಾವೀನ್ಯ ಯುವಕ ಹಳ್ಳಿಯಲ್ಲಿ ಹೇಗೆ ಇದ್ದಾನೆಂಬುದೇ ಶಾಮನಿಗೆ ಸಮಸ್ಯೆಯಾಯಿತು. ತನ್ನ ಕಡೆಗೇ ಬರುತ್ತಿದ್ದ ರಾಮು, ಶಾಮನನ್ನು ನೋಡಿ, ರಘುವು ನಗುತ್ತಾ "ಏನಯ್ಯಾ ರಾಮು, ಚೆನ್ನಾಗಿದ್ದೀಯಾ" ಎಂದು ಕೈ ಕುಲಕಿಸಿ ಪಕ್ಕದಲ್ಲಿದ್ದ ಶಾಮನ ಮುಖವನ್ನು ನೋಡಿ "ಇವರ್ಯಾರಪ್ಪಾ, ಮನೆಗೆ ಹೊಸಬರಂತಿದೆ" ಎಂದ. ಶಾಮನ ವಿಷಯವನ್ನು ರಾಮುವು ಸೂಕ್ಷ್ಮವಾಗಿ ತಿಳಿಸಿ, ಒಂದೆರಡು ನಿಮಿಷ ಮಾತಾಡಿದನಂತರ, ಶಾಮು, ರಾಮು ಇಬ್ಬರೂ ಮನೆಯಿಂದ ಹೊರಗೆ ಹೋದರು. ಸೀತಮ್ಮನವರು ರಘು ಒಬ್ಬನೇ ಇರುವುದನ್ನು ನೋಡಿ, ಮೆಲ್ಲಗೆ ಅವನನ್ನು ಬರಮಾಡಿದ ಉದ್ದೇಶವನ್ನು ವಿವರಿಸಿದರು. "ಕಮಲಳಂತಹ ಹೆಣ್ಣು ಸಿಕ್ಕಿದರೆ ಯಾರು ಬೇಡವೆನ್ನುತ್ತಾರೆ" ಎಂದು ರಘು ಉಕ್ಕಿ ಬರುತ್ತಿದ್ದ ಸಂತಸವನ್ನು ವ್ಯಕ್ತಪಡಿಸಲು ಸಾಧ್ಯವಾಗದೆ ಒದ್ದಾಡಿದ. ಅಂದೇ ಕಮಲಳು ತನ್ನ ಹೆಂಡತಿಯಾಗಿ ಬಿಟ್ಟಳೇನೋ ಎನ್ನುವಷ್ಟು ಸಂತಸವಾಯಿತು ಅವನಿಗೆ. ಪುನಃ ಸೀತಮ್ಮನವರನ್ನು ಮಾತಾಡಿಸದೆ ರಘುವು ತಕ್ಷಣ ಕಮಲಳ ಕೊಠಡಿಯ ಕಡೆ ಧಾವಿಸಿದ.

ಕಮಲಳಿಗೆ ವಯಸ್ಸು ಚಿಕ್ಕದೇ ಆಗಿದ್ದರೂ ಪ್ರಪಂಚ ಜ್ಞಾನವು ಕಮ್ಮಿಯಾಗಿರಲಿಲ್ಲ. ತನ್ನ ಮನೆಯಲ್ಲಿ ನಡೆಯುತ್ತಿದ್ದ ವಿಷಯಗಳೆಲ್ಲಾ ಅವಳಿಗೆ ಗೊತ್ತಿತ್ತು—ಅರ್ಥಮಾಡಿಕೊಳ್ಳುವ ಶಕ್ತಿಯೂ ಆಕೆಗೆ ಸಾಕಷ್ಟು ಇದ್ದಿತೆನ್ನಬಹುದು. ಈಚೆಗೆ ತನ್ನ ಚಿಕ್ಕಮ್ಮನಿಂದ ಕೆಲವು ಒಳ್ಳೆಯ ಮಾತುಗಳನ್ನು ಕೇಳುತ್ತಿದ್ದರೂ, ತನ್ನ ಅಣ್ಣನ ವಿಷಯದಲ್ಲಿ ಆಕೆಯು ತೋರುತ್ತಿದ್ದ ಅನಾದರಣೆ ಜತೆಗೆ ದ್ವೇಷದಿಂದ, ಆಕೆಯ ಮೃದು ಮಾತುಗಳ ಒಳಗೆ ಏನೋ ಅಡಗಿರಬೇಕೆಂದು ತೋಚಿತ್ತು. ಮನೆಗೆಲ್ಲಾ ಅಧಿಕಾರಿಯಾದ ಸೀತಮ್ಮನವರಿಂದಲೇ ತನ್ನ ಮುಂದಿನ ಹಾದಿಯು ಸಹಾ ತೋರಿಸಲ್ಪಡಬಹುದೆಂಬ ಅನುಮಾನ ಕಮಲಳ ಮನಸ್ಸಿಗೆ ಭಯವನ್ನೇ ಉಂಟುಮಾಡಿತು. ಅನೇಕ ದಿನಗಳಿಂದ ತಮ್ಮ ಮನೆಯಲ್ಲೇ ಇದ್ದು, ತಮ್ಮಯ್ಯನವರಿಗೆ ಅಚ್ಚುಮೆಚ್ಚಾಗಿ, ರಾಮುವಿನ ವಿಶ್ವಾಸವನ್ನು ಸಂಪಾದಿಸಿ, ಮನೆಯವರ ಪೈಕಿ ಒಬ್ಬನಂತೆ ಪಳಗಿ ಹೋಗಿದ್ದ ಶಾಮನೊಡನೆ ಒಂದೆರಡು ಬಾರಿ ಕಮಲಳು ಮಾತಾಡಿದ್ದಳು. ಯಾವ ಉದ್ದೇಶದಿಂದಲೂ ಅಲ್ಲದೆ ಸಹಜವಾಗಿ ಒಂದೆರಡು ಮಾತಾಡುವ ಪ್ರಸಂಗ ಬಂದಿದ್ದರೂ, ಕಮಲಳಿಗೆ ಅವನ ವಿಷಯದಲ್ಲಿ ಒಂದು ರೀತಿಯ ಗೌರವವುಂಟಾಗಿತ್ತು. ಸರಳವೂ ಸಹಜವೂ ಆಗಿದ್ದ ಅವನ ನಡೆ ನುಡಿ, ಆಕೆಯ ಮನಸ್ಸಿನಮೇಲೆ ಒಳ್ಳೆಯ ಪರಿಣಾಮವನ್ನೇ ಉಂಟುಮಾಡಿತ್ತೆನ್ನಬಹುದು. ವಯಸ್ಸು ಚಿಕ್ಕದೇ ಆಗಿದ್ದರೂ ಅವನ ಮುಖದಲ್ಲಿ ವ್ಯಕ್ತವಾಗುತ್ತಿದ್ದ ತಿಳುವಳಿಕೆ, ಜ್ಞಾನ, ಕಮಲಳಿಗೆ ಅರ್ಥವಾಗದೇ ಹೋಗಿರಲಿಲ್ಲ ಒಟ್ಟಿನಲ್ಲಿ ಆತನು ಬಹುಶಃ ಕಷ್ಟದಿಂದ ಬೆಳೆದವನು ಎನ್ನುವುದೇ ಅವಳ ಅಭಿಪ್ರಾಯ. ನಾನಾ ವಿಧವಾಗಿ ಆಲೋಚಿಸುತ್ತಾ, ತನ್ನ ಪುಸ್ತಕಗಳನ್ನು ಸರಿಯಾಗಿ ಜೋಡಿಸುತ್ತಿರುವಾಗ "ಹಲೋ ಕಮಲೂ" ಎಂದು ಕೂಗಿಕೊಂಡು ರಘುವು ನುಗ್ಗಿದ. ಕಮಲಳಿಗೆ ಅವನ ಬರುವಿಕೆಯಿಂದ ಆಶ್ಚರ್ಯವೇನೂ ಆಗಲಿಲ್ಲ. ಹಿಂದೆ ಏಳೆಂಟು ವರ್ಷಗಳ ಮೊದಲು ಒಮ್ಮೆ ಅವನು ಬಂದಿದ್ದಾಗಲೂ ಅದೇ ಮಾತನ್ನು ಆಡಿದ್ದ. ಕಮಲಳು ನಿಧಾನವಾಗಿ ಹಿಂದಿರುಗಿ ನೋಡಿದಳು. ಅಲ್ಲಿದ್ದ ಕುರ್ಚಿಯೊಂದರಮೇಲೆ ರಘುವು ಕುಳಿತು ಮುಗುಳ್ನಗೆ ಸೂಸುತ್ತಿದ್ದ. ತನ್ನ ಕಡೆಗೆ ಕಮಲಳು ತಿರುಗಿದನಂತರ "ಎಷ್ಟು ಬೆಳೆದುಬಿಟ್ಟಿದ್ದೀಯಾ ಕಮಲೂ, ತುಂಬಾ ಚೆನ್ನಾಗಿದ್ದೀ. ನೋಡೋದಕ್ಕೆ ಎರಡು ಕಣ್ಣು ಸಾಲದು"

ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ. ಕಮಲಳಿಗೆ ರಘುವಿನೊಡನೆ ಸಲಿಗೆ ಮಾತುಗಳು ಬೇಕಿರಲಿಲ್ಲ. ಆದ್ದರಿಂದ ಅವನು ಬಂದು ೫-೬ ನಿಮಿಷಗಳಾದರೂ ಅವಳಿಂದ ಮಾತೊಂದೂ ಬಾರದೆಹೋಯಿತು. "ಯಾಕೆ, ನನ್ನೊಡನೆ ಮಾತಾಡೋದಕ್ಕೆ ನಾಚಿಕೆಯೇ, ನಾಳೆ ನಿನ್ನ ಮದುವೆಮಾಡಿಕೊಂಡರೆ ಏನು ಮಾಡುತ್ತೀ?" ಎಂದು ರಘುವು ಕುಚೇಷ್ಟೆಯನ್ನು ಮಾಡಲು, ಕಮಲಳಿಗೆ ಅವನ ಆಗಮನದ ಒಳಾರ್ಥ ತಿಳಿಯಿತು. "ಆಗ ನೋಡೋಣ" ಎಂದಿಷ್ಟೇ ಹೇಳಿ, ಆ ಕೊಠಡಿಯನ್ನು ಬಿಟ್ಟು ಹೊರಟುಹೋದಳು. ಇನ್ನೆರಡು ದಿನ ಕಳೆದರೆ ದಾರಿಗೆ ಬರಬಹುದೆಂದು ಸಮಾಧಾನಪಡುತ್ತಾ ರಘುವು ಸೀತಮ್ಮನವರ ಬಳಿಗೆ ಹಿಂದಿರುಗಿದ. ಕಮಲಳ ವರ್ತನೆಯನ್ನು ಕೇಳಿ ಸೀತಮ್ಮನವರಿಗೆ ರೇಗಿದ್ದರಲ್ಲಿ ತಪ್ಪೇನೂ ಇಲ್ಲ. "ನೀನು ಸುಮ್ಮನಿರು ನಾನೇ ದಾರಿಗೆ ತರುತ್ತೇನೆ" ಎಂದು ರಘು ತನ್ನ ಅಕ್ಕನನ್ನು ಸಂತೈಸಿದ. ಕಮಲಳು ತನ್ನ ಕೊಠಡಿಯಿಂದ ನೇರವಾಗಿ ಮನೆಯ ಮುಂದಿನ ಪುಟ್ಟ ಹೂದೋಟಕ್ಕೆ ಪ್ರವೇಶಿಸಿದಳು ಮುಂದೇನು ಮಾಡಬೇಕೆಂಬುದೇ ಆಕೆಯ ಯೋಚನಾ ಲಹರಿಯಾಗಿತ್ತು. ತಂದೆಯೊಡನೆ ಹೇಳಿಕೊಂಡರೂ ಒಂದೇ, ಬಿಟ್ಟರೂ ಅಷ್ಟೆ— ಯಾಕೆಂದರೆ, ಇಂತಹ ವಿಷಯಗಳಿಗೆ ಅವರು ಹೆಚ್ಚು ಗಮನವನ್ನೇ ಕೊಡದಂತೆ ಸೀತಮ್ಮನವರು ಮಾಡಿದ್ದರು—ಅಣ್ಣನಾದ ರಾಮುವು ತಂಗಿಯ ಸೌಖ್ಯಕ್ಕಾಗಿ ಪ್ರಯತ್ನಿಸುವವನಾದರೂ ಅವನ ಮಾತು ನಡೆಯುತ್ತಿರಲಿಲ್ಲ. ಸೀತಮ್ಮನವರ ಉಪಾಯಗಳಿಂದ ತಾನು ರಘುವನ್ನೇ ವಿವಾಹವಾಗುವ ಸ್ಥಿತಿ ಬಂದೊದಗುತ್ತದೇನೋ ಎಂಬ ಭಯವೂ ಕಮಲಳಿಗೆ ಉಂಟಾಯಿತು. ರಾಮು ಮನೆಗೆ ಬಂದೊಡನೆ ಈ ವಿಷಯಗಳನ್ನೆಲ್ಲಾ ತಿಳಿಸಬೇಕೆಂದು ನಿರ್ಧರಿಸಿದಳು.

೫

ಸ್ವಲ್ಪ ಹೊತ್ತು ಊರೊಳಗೆ ತಿರುಗಾಡಿಕೊಂಡು ರಾಮು ಮತ್ತು ಶಾಮು ಮನೆಗೆ ಬರುವಷ್ಟರಲ್ಲಿ ಬಾಗಿಲಿನಲ್ಲೇ ಕಮಲಳು ಅವರನ್ನು ಸಂಧಿಸಿದಳು. ಮೂವರೂ ಒಳಗೆ ಹೋಗುತ್ತಿರುವಾಗ ಅಲಂಕೃತನಾದ ರಘುವು ಹೊರಗೆ ಬಂದ. ರಘುವಿನ ಕಣ್ಣಿಗೆ ಆಗ ಶಾಮುನು, ಬಹುಶಃ ಇವನು ತನ್ನ ಪ್ರತಿಸ್ಪರ್ಧಿಗಾಗಿ ನಿಂತಿರಬಹುದೇ ಎನ್ನಿಸಿತು. ಶಾಮುವಿನ ಮುಖದಲ್ಲಿ ಕಾಣುತ್ತಿದ್ದ

ಅನುಭವ, ದೃಢತೆ, ತಿಳಿಮನಸ್ಸು–ಇವು ಒಂದು ವೇಳೆ ಅವನು ಪ್ರತಿಸ್ಪರ್ಧಿಯೇ ಆಗಿದ್ದಲ್ಲಿ, ತನ್ನ ಕೆಲಸವು ಕಷ್ಟವೆಂದೂ ರಘುವಿನ ಯೋಚನೆಗೆ ತಾಕಿತು. ಶಾಮನೂ ರಘುವನ್ನು ಉಂಗುಷ್ಠದಿಂದ ಶಿರಸ್ಸಿನವರೆವಿಗೂ ನೋಡಿದ ಅವನ ಬೂಟಾಟಿಕೆ, ಅಜ್ಞಾನ, ದುಂದುಗಾರಿಕೆ, ಮುಖದಿಂದಲೇ ನೋಡಿದವರಿಗೆ ತಿಳಿಯುತ್ತಿತ್ತು. ರಘುವು ಮಾತಾಡದೆ ಸರಸರನೆ ತನ್ನ ದಾರಿಯನ್ನು ಹಿಡಿದ. ನಂತರ ಮೂವರೂ ಕೊಠಡಿಗೆ ಹೋಗಿ ಕುಳಿತರು ಆಗಲೇ ಶಾಮನು, ಆ ಮನೆಯಲ್ಲಿ ಬಹಳ ದಿನಗಳಿಂದ ಇದ್ದರೂ, ಕಮಲಳನ್ನು ಸರಿಯಾಗಿ ನೋಡಿದ್ದ. ಅವಳ ಮೋಹಕ ರೂಪೂ, ನಿಲುವೂ, ಅಂದ ಚಂದಗಳೂ ಶಾಮನಿಗೆ ಚೆನ್ನಾಗಿ ತಿಳಿದರೂ, ಮನಸ್ಸು ಮಾತ್ರ ಆಕೆಯು ಇದ್ದ ಸನ್ನಿವೇಶಕ್ಕಾಗಿ ಮರುಗಿತು. ರಘುವು ಬಂದಿರುವ ಉದ್ದೇಶವನ್ನು ತಿಳಿದಮೇಲಂತೂ ಶಾಮನಿಗೆ ಸಂತಾಪವಾಯಿತು. ಮೂವರೂ ಮಾತಾಡುತ್ತಾ ಕುಳಿತಿದ್ದಾಗ ಅನಿರೀಕ್ಷಿತವಾಗಿ ತಮ್ಮಯ್ಯನವರು ರಾಮುವನ್ನು ಕರೆದರು. ಶಾಮನೂ ಅವನೊಡನೆ ಎದ್ದುಬಂದು ಕಿಟಕಿಯ ಬಳಿ ನಿಂತುಕೊಂಡ. ಮುಂದೇನು ಮಾಡಬೇಕೆಂದು ಯೋಚಿಸುತ್ತಾ ಕಮಲಳೂ ಶಾಮನೊಡನೆ ಮಾತಾಡುತ್ತಾ ನಿಂತಳು. ಮಹಡಿಯನ್ನು ಹತ್ತುತ್ತಿದ್ದ ಸೀತಮ್ಮನವರು ಶಾಮು, ಕಮಲಳು ಕಿಟಕಿಯ ಹತ್ತಿರ ನಿಂತಿರುವುದನ್ನು ನೋಡಿದರು. ಆದರೆ ಯಾವ ಮಾತನ್ನೂ ಆಡಲಿಲ್ಲ–ಸಮಯವರಿತು ವಿಷಯಗಳನ್ನು ತಮ್ಮ ಅನುಕೂಲತೆಗೆ ತಕ್ಕಂತೆ ಉಪಯೋಗಿಸಿಕೊಳ್ಳುವ ಬುದ್ಧಿ ಸೀತಮ್ಮನವರದು. ಕಮಲಳು ರಘುವಿನೊಡನೆ ಸರಿಯಾಗಿ ಮಾತಾಡದಿರಲು ಶಾಮನೇ ಕಾರಣವಾಗಿರಬಹುದೆಂದು ಅವರಿಗೆ ಸಹಜವಾಗಿ ತೋರಿತು.

ಸಂಜೆ ೭ ಘಂಟೆ ಹೊತ್ತಿಗೆ ಸರಿಯಾಗಿ ಪುನಃ ರಘುವು ಅಕ್ಕನ ಮನೆಯನ್ನು ಸೇರಿದ ಕಮಲಳಿಗಾಗಿ ಪೇಟೆಯಿಂದ ಹೂವು, ರಿಬ್ಬನ್ನು, ಮುಂತಾದ ಚಿಕ್ಕಪುಟ್ಟ ಸಾಮಾನುಗಳೂ ಅವನಿಂದ ತರಲ್ಪಟ್ಟಿದ್ದವು ತಂದ ಪದಾರ್ಥಗಳನ್ನು ಅಕ್ಕನಿಗೆ ತೋರಿಸಿ ಕಮಲಳ ಕೊಠಡಿಗೆ ಪ್ರವೇಶಿಸಿದ. ಕಮಲಳು ಪುಸ್ತಕವೊಂದನ್ನು ಓದುತ್ತಾ ಕುಳಿತಿದ್ದಳು. ರಘುವಿನೊಡನೆ ಪುನಃ ಮಾತಾಡಬೇಕಾಯಿತಲ್ಲಾ ಎಂದು ಆಕೆಗೆ ಬೇಸರವೇ ಆಯಿತು ಅವನನ್ನು ಕಂಡರೆ ಕಮಲಳಿಗೆ ಸ್ವಲ್ಪವೂ ಸರಿದೋರುತ್ತಿರಲಿಲ್ಲ. ಇದಕ್ಕೆ ಕಾರಣ ಸೀತಮ್ಮನವರು

ತನ್ನನ್ನೂ ಶಾಮುವನ್ನೂ ಮಾತ್ಸರ್ಯದಿಂದ ನೋಡುತ್ತಿದ್ದದ್ದೇ ಎನ್ನಬಹುದು. "ಹಲೋ ಕಮಲೂ, ಈ ರಿಬ್ಬನ್ ನೋಡು, ಹೊಸದಾಗಿ ಬಂದಿತ್ತು" ಎಂದು ಹೇಳುತ್ತಾ ತಂದಿದ್ದ ಪಟ್ಟಣವನ್ನು ಕಮಲಳ ಹತ್ತಿರವಿದ್ದ ಮೇಜಿನ ಮೇಲಿರಿಸಿದ. "ರಘೂ, ನಿನ್ನ ಹುಡುಗಾಟಿಕೆ ಇನ್ನೂ ಮುಗಿದಿಲ್ಲ" ಎಂದು ಟೀಕಿಸಿದಳು. "ಯಾಕೆ ಮಾತಾಡಬಾರದು ಕಮಲೂ—ನಿನ್ನ ಕಂಡರೆ ನನಗೆಷ್ಟೋ ವಿಶ್ವಾಸ" ರಘುವು ತನ್ನ ಹೃದಯವನ್ನು ಬಿಚ್ಚಿದ. "ಅದು ಸರಿ. ಆದರೆ ನೀನು ಹೀಗೆ ಬಂದು ಸಲಿಗೆಯಿಂದ ಮಾತಾಡುವುದು ನನಗೆ ಸರಿ ಕಾಣುವುದಿಲ್ಲ" ಪುನಃ ಕಮಲಳು ತನ್ನ ಮೊದಲ ಮಾತನ್ನು ಒತ್ತಿ ಹೇಳಿದಳು. "ಯಾತಕ್ಕೆ? ನಾನು ಬಂದರೆ ನಿನಗೆ ಬೇಸರವೇ" ದೈನ್ಯದಿಂದ ರಘುವು ವಿಚಾರಿಸಿದ ಅವನ ಪ್ರಶೆಗೆ ಉತ್ತರವೇ ಬರಲಿಲ್ಲ—ಕಮಲಳು ಎದ್ದು ಕೋಣೆಯಿಂದ ಹೊರಟುಹೋದಳು. ಸೀತಮ್ಮನವರಿಗೆ ನಡೆದ ವಿಷಯವನ್ನು ವರದಿಮಾಡಲು ರಘುವು ನಿಧಾನವಾಗಿ ಹೆಜ್ಜೆ ಹಾಕಿದ. ಕಮಲಳ ದುರಹಂಕಾರವನ್ನು ತಮ್ಮನಿಂದ ವಿಶದವಾಗಿ ತಿಳಿದಮೇಲೆ ಸೀತಮ್ಮನವರ ಕೋಪ ಇಮ್ಮಡಿಯಾಯಿತು. ಶಾಮುನೊಡನೆ ಸರಸವಾಗಿ ಮಾತಾಡುವುದೇನು? ರಘುವನ್ನು ಕಂಡರೆ ಸಿಡುಗುಟ್ಟುವುದೇಕೆ ಎನ್ನುವ ವಿಷಯವು ಅವರ ಪಿತ್ತವನ್ನು ಕೆರಳಿಸಿತು. ಸಾಧ್ಯವಾದರೆ ಆ ದಿನವೇ ತಮ್ಮಯ್ಯನವರೊಡನೆ ಮನೆಯಲ್ಲಿ ನಡೆಯುತ್ತಿರುವ ಸುದ್ದಿ ಮತ್ತು ಕಮಲಳ ಸ್ವೇಚ್ಛೆ ಬಗ್ಗೆ ಮಾತಾಡಬೇಕೆಂದು ನಿರ್ಧರಿಸಿದರು. ಆದರೆ ಆ ರಾತ್ರಿ ತಮ್ಮಯ್ಯನವರು ಮನೆಗೇ ಬರಲಿಲ್ಲ. ಕಾರಣಾಂತರಗಳಿಂದ ಬೇರೆ ಊರಿಗೆ ಹೋಗಬೇಕಾದ್ದರಿಂದ ಶಾಮುನನ್ನೂ ಕರೆದುಕೊಂಡು ಪ್ರಯಾಣಮಾಡಿ, ಮನೆಗೆ ಸಮಾಚಾರವನ್ನು ಜವಾನನ ಮೂಲಕ ತಿಳಿಸಿದರು.

ರಘುವು ಒಮ್ಮನಸ್ಸಿನಿಂದ ಕಮಲಳನ್ನು ಮಾತಾಡಿಸಲು ಪ್ರಯತ್ನಿಸಿದರೂ, ಕಮಲಳಿಗೆ ಮಾತ್ರ ಶಾಮುನ ವಿಚಾರದಲ್ಲಿ ಗೌರವ, ಆದರ ಬೆಳೆಯಿತು. ಶಾಮುನ ನಿಧಾನ, ಸರಳತೆ, ಅನುಭವ, ಇವೇ ಆಕೆಯ ಮನಸ್ಸಿನಲ್ಲಿ ಮುಂದೆ ಬರುತ್ತಿತ್ತು. ಐದಾರು ದಿನಗಳು ಕಳೆಯುವದರಲ್ಲಿಯೇ ರಘುವಿಗೆ ಹಿಂದಿರುಗಬೇಕೆಂದು ಮಿತ್ರನೊಬ್ಬನಿಂದ ಪತ್ರ ಬಂದುದರಿಂದ, ಕೊನೆಯ ಸಾರಿ

ಕಮಲಳೊಡನೆ ಮಾತಾಡಲು ಪ್ರಯತ್ನಿಸಿ, ಯಶಸ್ವಿಯಾಗದೆ, ತನ್ನ ಹಳ್ಳಿಗೆ ಹಿಂದಿರುಗಿದ.

ಸೀತಮ್ಮನವರ ತಂದೆ ಸತ್ತಮೇಲೆ ಉಳಿದಿದ್ದ ಆಸ್ತಿಯೆಲ್ಲಾ ಒಬ್ಬನೇ ಮಗನಾದ ರಘುವಿನ ಕೈಸೇರಿತು. ಮೊದಲಿನಿಂದಲೂ ತಂದೆ ತಾಯಿಯ ಪ್ರೀತಿಗೆ ಪಾತ್ರನಾಗಿ ಮುದ್ದಿನಿಂದ ಬೆಳೆದ ಹುಡುಗ—ಕಷ್ಟವೆಂಬುದೇ ಅವನಿಗೆ ತಿಳಿದಿರಲಿಲ್ಲ. ವಿದ್ಯೆಗಾಗಿ ಬೇರೆ ಊರುಗಳಿಗೆ ಒಬ್ಬನೇ ಮಗನನ್ನು ಮನೆ ಬಿಟ್ಟು ಕಳುಹಿಸುವುದು ಹ್ಯಾಗೆಂದು ಅವನ ತಾಯಿ ಯೋಚಿಸಿದುದರಿಂದ ರಘುವಿನ ಓದು ಚಿಕ್ಕಂದಿನಲ್ಲಿಯೇ ಮುಕ್ತಾಯವಾಗಿತ್ತು. ಆದರೆ ಇತರರನ್ನು ನೋಡಿ, ತಾನೂ ಅವರಂತೆ ಇರಬೇಕೆಂಬ ಅನುಕರಣದ ಪ್ರಯತ್ನದಲ್ಲಿ ರಘುವಿಗೆ ಸ್ವಲ್ಪ ಈಗಿನ ಕಾಲದ ಅಭಿರುಚಿಯುಂಟಾಗಿತ್ತು. ಇದರಿಂದಲೇ ಅವನು ಯಾವಾಗಲೂ ಒಳ್ಳೆಯ ಒಟ್ಟೆಗಳನ್ನು ಧರಿಸಿ, ಅಲಂಕೃತನಾಗಿರುತ್ತಿದ್ದ. ತಂದೆಯು ಸತ್ತ ಕೆಲವು ವರ್ಷಗಳಲ್ಲಿಯೇ ತಾಯಿಯೂ ತೀರಿಹೋದ್ದರಿಂದಲೂ, ವಿವಾಹವಾದ ಅಕ್ಕನು ಗಂಡನ ಮನೆ ಸೇರಿದ್ದರಿಂದಲೂ, ಮನೆಗೆಲ್ಲಾ ರಘುವೇ ಯಜಮಾನನಾದ. ಸೀತಮ್ಮನವರು ತಮ್ಮ ಮನೆಯಲ್ಲಿ ಬಂದಿರಬೇಕೆಂದು ಕೇಳಿದರೂ ರಘುವಿನ ಮನಸ್ಸು ಒಪ್ಪಲಿಲ್ಲ—ಸ್ವೇಚ್ಛೆಯಾಗಿರುವುದೇ ಲೇಸೆಂದು ತೋರಿತು. ಆದ್ದರಿಂದಲೇ ಅವನು ಹಳ್ಳಿಯ ವಾಸಮಾಡುತ್ತಿದ್ದುದು. ಸರಿಯಾದ ವಿದ್ಯೆ, ಬುದ್ಧಿ ಇಲ್ಲದೆ ಕೇವಲ ಖರ್ಚುಮಾಡುವ ಮಾರ್ಗವೊಂದೇ ಚೆನ್ನಾಗಿ ತಿಳಿದಿದ್ದ ರಘುವಿನ ಕೈಯಲ್ಲಿ ಪಿತ್ರಾರ್ಜಿತವಾದ ಆಸ್ತಿ ಬಹಳ ಕಾಲ ಉಳಿಯಲಿಲ್ಲ. ಇವನ ಅಲಕ್ಷ್ಯ, ತಾತ್ಸಾರ ಸ್ವಭಾವಗಳಿಂದ ಬೇಸರಹೊಂದಿ, ರೈತರು ಸಹಾ ತಮ್ಮ ಹಕ್ಕನ್ನು ರಘುವಿನ ಜಮೀನುಗಳಮೇಲೆ ಸ್ಥಾಪಿಸಲು ಆರಂಭಿಸಿದರು. ಕೋರ್ಟು ಕಛೇರಿ ತಿರುಗಿ ಕೆಲವು ಜಮೀನುಗಳು ಕೈಬಿಟ್ಟಿತು. ತನ್ನ ಖರ್ಚಿಗಾಗಿ ರಘುವು ಸಾಲವನ್ನೂ ಮಾಡಬೇಕಾಯಿತು. ಇದೇ ಸಮಯಕ್ಕೆ ಹಳ್ಳಿಯ ಉಂಡಾಡಿಗರ ಸ್ನೇಹವನ್ನೆಲ್ಲಾ ರಘುವು ಸಂಪಾದಿಸಿದ್ದರಿಂದ, ದುರ್ವಿದ್ಯೆಗಳೂ ತಲೆಹಾಕಲು ಮೊದಲಾದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಇಸ್ಪೀಟು ಆಟವೇ ರಘುವಿನ ಮುಖ್ಯ ಕಸುಬಾಯಿತು. ಮೊದಲು ಕೆಲವು ದಿನ ಅದರಿಂದ ಚೆನ್ನಾಗಿ ಲಾಭ ಬಂದುತೆ ತೋರಿದ್ದರಿಂದ ಮುಂದೆ ಹಗಲಿರುಳೂ ಅದೇ ಕೆಲಸವನ್ನು ಹಿಡಿದ. ಊರಿನಲ್ಲಿ ಅವನ ವಿಷಯವಾಗಿ ಮಾತಾಡುವ

ಧೈರ್ಯ ಯಾರಿಗೂ ಇರಲಿಲ್ಲ—ಯಾರ ಬಾಯನ್ನಾದರೂ ಮುಚ್ಚಿಸುವ ಚಾಕಚಕ್ಯತೆ ರಘುವಿನಲ್ಲಿ ತುಂಬಿತ್ತು.

ತಮ್ಮಯ್ಯನವರು ಊರಿಗೆ ಹಿಂದಿರುಗಿದಮೇಲೆ ಸೀತಮ್ಮನವರಿಂದ ಮನೆಯಲ್ಲಿ ನಡೆದ ವಿಷಯಗಳನ್ನೆಲ್ಲಾ ವಿಶದವಾಗಿ ಕೇಳಿದರು. ಶಾಮನು ಕಮಲಳನ್ನು ಮಾತಾಡಿಸುತ್ತಿರುವನೆಂದೂ, ಇದರಿಂದ ಇಬ್ಬರಿಗೂ ಪ್ರೀತಿ ಬೆಳೆಯುವ ಸಂಭವವಿದೆಯೆಂದೂ ಸೀತಮ್ಮನವರು ಒತ್ತಿ ಒತ್ತಿ ಹೇಳಿದ ಮಾತುಗಳು ಅವರ ಮನಸ್ಸಿನಮೇಲೆ ಚೆನ್ನಾಗಿ ನಾಟಿತು. ಮುಂದೇನು ಮಾಡಬೇಕು, ಶಾಮನನ್ನು ಮನೆಬಿಟ್ಟು ಹೋಗಲು ಹೇಳುವುದೇ ಎಂದು ಅವರು ಯೋಚನೆಮಾಡುತ್ತಾ ಕೆಲವು ದಿನ ಕಳೆಯುವುದರೊಳಗೆ, ಯುದ್ಧದ ಕಾರ್ಮೋಡ ಎಲ್ಲೆಲ್ಲಿಯೂ ಆವರಿಸಲಾರಂಭವಾಯಿತು. ಜನಗಳ ಮನಸ್ಸು ತಳಮಳಗೊಂಡು, ಯಾವ ನಿಮಿಷಕ್ಕೆ ಏನು ಗತಿಯೋ, ನಮ್ಮ ದೇಶವು ಯಾವ ಘಳಿಗೆಯಲ್ಲಿ ಯುದ್ಧಭೂಮಿಯಾಗುವುದೋ ಎಂಬ ಭಯ ಭೀತಿಯು ಪ್ರತಿಯೊಬ್ಬರ ಮೆದುಳಿಗೂ ಯೋಚನೆಯನ್ನು ಕೊಟ್ಟಿತು. ಪದಾರ್ಥಗಳ ಬೆಲೆಯಂತೂ ಕ್ರಮೇಣ ಒಂದಕ್ಕೆ ಹತ್ತರಷ್ಟು ಹೆಚ್ಚಾಗಿ, ಬಡವರ ಬಾಳು ಶೋಕಪೂರಿತವಾಯಿತಲ್ಲದೆ, ತಿನ್ನುವುದಕ್ಕೆ ಅಭಾವವಾಗಿ ಸಾಯುವ ಸ್ಥಿತಿಗೆ ಬಂದುದರಿಂದ, ಬಂಡವಾಳಗಾರರೂ, ದೊಡ್ಡ ದೊಡ್ಡ ಉದ್ಯಮಗಳಲ್ಲಿ ಆಸಕ್ತಿ ವಹಿಸಿದ್ದ ಸಾಹುಕಾರರೂ ಕೊರಗಲುಪಕ್ರಮಿಸಿದರು. ಮನೆಯ ವಿಷಯದಲ್ಲಿ ಯೋಚನೆಗೆ ಸಿಕ್ಕಿದ್ದ ತಮ್ಮಯ್ಯನವರಿಗೆ ಹೊರಗಿನ ಶಾಖವೂ ಹೊಸದರಲ್ಲೇ ತಟ್ಟಿತು. ತಮ್ಮ ಕೈಲಿದ್ದ ಉದ್ಯಮಗಳು ಎಲ್ಲಿ ಹೋಗುವುವೋ ಎಂಬ ಅನುಮಾನವೂ ಅವರಿಗುಂಟಾಗಿ, ಮನೆಯಲ್ಲಿನ ವಿಷಯಗಳಿಗಿಂತ, ಈ ಯೋಚನೆಯೇ ಅಧಿಕವಾಯಿತು. ಬೇರೆ ಊರಿನ ಕಾರ್ಮಿಕರೂ, ಕೂಲಿ ಕಾರರೂ ಸಂಘಟಿಸಿದಂತೆ ತಮ್ಮಯ್ಯನವರ ಬಳಿ ಕೆಲಸಮಾಡುತ್ತಿದ್ದವರು ಸಹಾ ಒಗ್ಗಟ್ಟಾದರು. ಶಾಮನು ಮಾತ್ರ ಈ ಸಂದರ್ಭದಲ್ಲಿ ಹಗಲಿರಳೆನ್ನದೆ ದುಡಿದು, ತಮ್ಮಯ್ಯನವರಿಗೂ ಕೆಲಸದವರಿಗೂ ಮಧುರ ಬಾಂಧವ್ಯವನ್ನು ಏರ್ಪಡಿಸಲು ಪ್ರಯತ್ನಿಸಿದ. ಅವನು ಪಟ್ಟ ಶ್ರಮ, ಮುತುವರ್ಜಿ, ತಮ್ಮಯ್ಯ ನವರ ಮನಸ್ಸಿಗೆ ಸಂತೃಪ್ತಿಯನ್ನುಂಟುಮಾಡಿದರೂ, ಅವನ ವಿಷಯದಲ್ಲಿ ಪದೇ ಪದೇ ಸೀತಮ್ಮನವರು ಹುಳಿಹಿಂಡುತ್ತಿದ್ದರು. ಸುಮಾರು ೧೫–೨೦

ದಿನಗಳು ಅವಿಶ್ರಾಂತಿಯಿಲ್ಲದೆ ದುಡಿದುದರ ಫಲವಾಗಿ ತಮ್ಮಯ್ಯನವರ ಕೈಕೆಳಗಿನ ಕೆಲಸಗಾರರೆಲ್ಲಾ ಶಾಮನ ಮಾತಿನಂತೆ ನಡೆಯಲು ಒಪ್ಪಿದರು. ಪಟ್ಟಣದ ವಾತಾವರಣವನ್ನೂ, ಯೋಚನೆಗಳನ್ನೂ ಸ್ವಲ್ಪಮಟ್ಟಿಗಾದರೂ ಮರೆಯಲು, ತಮ್ಮಯ್ಯನವರು ಮಾರನಹಳ್ಳಿಗೆ ಹೋಗಿ ಕೆಲವು ದಿನಗಳಿದ್ದು ಬರಲು ನಿರ್ಧರಿಸಿ, ತಮ್ಮ ಮನೆಯವರನ್ನು ಕರೆದುಕೊಂಡು ಪ್ರಯಾಣ ಬೆಳಸಿದರು. ತಮ್ಮಯ್ಯನವರ ಗೃಹಕೃತ್ಯದ ಜವಾಬ್ದಾರಿ ಸಹಾ ಶಾಮನ ಮೇಲೆ ಇದ್ದುದರಿಂದ ಅವನೂ ಮಾರನಹಳ್ಳಿಗೆ ಹೋಗಿ ಅಲ್ಲಿ ಅವರಿಗೆ ಬೇಕಾದ ವ್ಯವಸ್ಥೆಯನ್ನು ಮಾಡಿದ. ಮಾರನಹಳ್ಳಿಗೆ ತಮ್ಮಯ್ಯನವರು ಬಂದ ಕೇವಲ ಒಂದು ವಾರದಲ್ಲೇ ರಾಮದಾಸರು ಆ ಹಳ್ಳಿಗೆ ಬಂದಿದ್ದರು. ಮನಸ್ಸಿನ ಯೋಚನೆಗಳನ್ನು ಮರೆಯಲು ತಮ್ಮಯ್ಯನವರು ದಾಸರಿಗೆ ಕಥೆಮಾಡುವಂತೆ ಹೇಳಿದರು. ಇದೇ ಸಮಯದಲ್ಲಿ ಶಾಮನು ತನ್ನ ಅಭಿಪ್ರಾಯಗಳನ್ನು ದಾಸರೆದುರಿಗೆ ಬಿಚ್ಚಿಟ್ಟು ಅವರಿಂದ ಮನ್ನಣೆಯನ್ನು ಪಡೆದಿದ್ದ.

ದಾಸರು ಶಾಮನ ವಿಷಯದಲ್ಲಿ ಆಡಿದ ಒಂದೆರಡು ಮಾತುಗಳು ತಮ್ಮಯ್ಯನವರಿಗೆ ಸರಿತೋರಿದರೂ, ಅದಕ್ಕೆ ಆ ರಾತ್ರಿಯೇ ಸೀತಮ್ಮನವರಿಂದ ಊಪ್ಪು ಹಾಕಲ್ಪಟ್ಟಿತು. ಮಾರನಹಳ್ಳಿಯಲ್ಲೇ ತಮ್ಮ ಕಾರ್ಯವನ್ನು ನೆರವೇರಿಸಬೇಕೆಂದು ಅವರು ನಿರ್ಧರಿಸಿದ್ದರು. ಕಮಲಳಿಗಾಗಲೀ ಶಾಮನಿಗಾಗಲೀ ಸೀತಮ್ಮನವರ ಹೃದಯವನ್ನು ಅರಿಯುವ ಶಕ್ತಿಯಿರಲಿಲ್ಲ. ಅವರಿಬ್ಬರೂ ಎಂದಿನಂತೆ ಅವಶ್ಯಕ ಬಿದ್ದಾಗ ಮಾತಾಡುತ್ತಿದ್ದರು. ರಾಮುವು ಸಹಾ ಹಳ್ಳಿಯಲ್ಲಿ ಬೇರೆ ಕೆಲಸವಿಲ್ಲದುದರಿಂದ, ಪುರುಸೊತ್ತಾದಾಗಲೆಲ್ಲಾ ಶಾಮನೊಡನೆ ಪ್ರಾಪಂಚಿಕ ವಿಷಯಗಳ ಬಗ್ಗೆ ಚರ್ಚೆಮಾಡುತ್ತಿದ್ದ—ಈ ಮಾತೂ ಕಥೆಗಳನ್ನು ಕೇಳಲು ಕಮಲಳೂ ತುಂಬಾ ಉತ್ಸುಕತೆಯನ್ನು ತೋರಿಸುತ್ತಿದ್ದಳು. ಹಳ್ಳಿಯಲ್ಲಿ ಕೆಲವು ದಿನವಿದ್ದು ಅಲ್ಲಿನ ಅವಶ್ಯಕ ವಿಷಯಗಳ ಕಡೆ ಗಮನಕೊಟ್ಟಮೇಲೆ ಶಾಮನು ಪುನಃ ಮಂಗಳೂರಿಗೆ ಹೋಗಿ, ತಮ್ಮಯ್ಯನವರ ಕಾರ್ಯಕಲಾಪಗಳನ್ನು ನೋಡಿ ಹಿಂದಿರುಗುತ್ತಿದ್ದ. ಹೀಗೆ ಒಂದೆರಡು ದಿನ ಮಂಗಳೂರಿನಲ್ಲೂ ಮಿಕ್ಕ ದಿನ ಹಳ್ಳಿಯಲ್ಲೂ ಶಾಮನು ಇರಬೇಕಾಯಿತು. ಮಂಗಳೂರಿಂದ ಬಂದು ಹೋಗುತ್ತಿದ್ದ ಶಾಮನಿಂದಲೇ ತಮಗೆ ಬೇಕಾದ ಸಾಮಾನುಗಳನ್ನು ಕಮಲ, ರಾಮು ತರಿಸಿಕೊಳ್ಳುತ್ತಿದ್ದರು.

ಈ ಸಲಿಗೆ, ಮಾತೂ ಕಥೆ ಸೀತಮ್ಮನವರಿಗೆ ಕಣ್ಣು ಕೆಂಪಗೆ ಮಾಡುತ್ತಿತ್ತು. ಶಾಮನ ವಿಷಯವಾಗಿ ತಪ್ಪದೆ ಸೀತಮ್ಮನವರು ತಮ್ಮಯ್ಯನವರಿಗೆ ವರದಿ ಮಾಡಲುಪಕ್ರಮಿಸಿದರು. "ಬೆಳೆದ ಹುಡುಗಿ ಮನೆಯಲ್ಲಿರುವಾಗ, ಯಾವನೋ ಪರದೇಶಿ ಯುವಕನನ್ನು ಮನೆಯೊಳಗಿಟ್ಟುಕೊಂಡರೆ, ಜನ ಏನಂದಾರು" ಎಂಬ ಪ್ರಶ್ನೆ ಸೀತಮ್ಮನವರಿಂದ ಒಂದು ದಿನ ಏಕಾಂತದಲ್ಲಿ ಹಾಕಲ್ಪಟ್ಟಿತು. ಸೀತಮ್ಮನವರು ಹೇಳಿದ ಮಾತು ಸರಿಯಿರಬಹುದೇ ಎಂದು ತಮ್ಮಯ್ಯನವರು ಆಲೋಚಿಸುತ್ತಿರುವಾಗಲೇ "ಪಟ್ಟಣದಲ್ಲಿ ಯಾರೂ ಕೇಳುವುದಿಲ್ಲ. ಆದರೆ ಚಿಕ್ಕ ಪುಟ್ಟ ಹಳ್ಳಿಗಳಲ್ಲಿ ಈ ವಿಷಯಗಳು ಬಹು ಬೇಗ ಪ್ರಚಾರಕ್ಕೆ ಬಂದು ಮಾನವೇ ಹೋಗುತ್ತೆ" ಎಂದು ತಮ್ಮ ಮೊದಲಿನ ಅಭಿಪ್ರಾಯವನ್ನು ಸೀತಮ್ಮನವರು ಪುಷ್ಟೀಕರಿಸಿದರು ತಮ್ಮಯ್ಯನವರು ಯಾವ ಮಾತನ್ನೂ ಆಡಲಿಲ್ಲ ಪುನಃ ಅವರ ಹೆಂಡತಿಯೇ "ಜನಗಳೇನಾದರೂ ಹುಡುಗಿಯ ವಿಷಯವಾಗಿ ಕೆಟ್ಟ ಕೂಗನ್ನು ಕೂಗಿದರೆ ಅವಳ ಮುಂದಿನ ಜೀವನವನ್ನೇ ಕೆಡಿಸಿದಂತಾಗುವುದಿಲ್ಲವೇ" ಎಂದು ಪ್ರಶ್ನಿಸಲು, ತಮ್ಮಯ್ಯನವರಿಗೆ ಆಗ ಹೆಂಡತಿಯ ಮಾತಿನಲ್ಲಿ ಸತ್ಯಾಂಶವಿರಬಹುದೂ ಎನ್ನಿಸಿತು. "ಶಾಮನು ಒಳ್ಳೆಯ ಹುಡುಗ ಜನ ಮಾತಾಡುವುದಕ್ಕೇನು. ಅವನಿಂದ ನನ್ನ ಕೆಲಸಗಳಿಗೆ ಎಷ್ಟು ಉಪಕಾರವಾಗುತ್ತಿದೆ. ನಿನಗೇನು ಗೊತ್ತು" ಎಂದರು. ಅವರ ಮಾತು ಮುಗಿಯುವುದರಲ್ಲೇ ಸೀತಮ್ಮನವರು "ಈ ವಿಷಯದಲ್ಲಿ ಒಳ್ಳೆಯದೂ ಕೆಟ್ಟದ್ದೂ ಎಂದು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಕಾರ್ಯ ಮಿಂಚಲು ಅವಕಾಶ ಕೊಟ್ಟು, ನಂತರ ಒದ್ದಾಡುವುದಕ್ಕಿಂತ ಮೊದಲೇ ಜಾಗರೂಕರಾಗಿರುವುದು ವಿವೇಕವಲ್ಲವೇ" ಎಂದು ಗಂಡನಿಗೆ ಹೇಳಿ, "ನಿನ್ನೆ ತಾನೆ ಪಕ್ಕದಮನೆ ರಂಗಮ್ಮನವರು ಶಾಮನ ವಿಷಯವಾಗಿ ವಿಚಿತ್ರ ಪ್ರಶ್ನೆಗಳನ್ನು ಕೇಳಿದರು. ಕಮಲ,ಅವನೂ ಸಲಿಗೆಯಿಂದ ನಗು ನಗುತ್ತಾ ಮಾತಾಡುವುದನ್ನು ಕಂಡು, ಇಬ್ಬರಿಗೂ ವಿವಾಹಮಾಡುವ ಯೋಚನೆ ಇದೆಯೇ ಎಂದು ಪ್ರಶ್ನಿಸಿದರು. ನನಗೆ ಉತ್ತರ ಹೇಳಲು ಬಾಯೇ ಬರಲಿಲ್ಲ" ಎಂಬುದಾಗಿ ಸುಳ್ಳೊಂದನ್ನು ಸೇರಿಸಿ, ನಿಜವಿರಬಹುದೂ ಎನ್ನುವಂತೆ ತಮ್ಮಯ್ಯನವರ ಮನಸ್ಸಿಗೆ ಅಭಿಪ್ರಾಯವನ್ನು ನಾಟಿದರು. ತಮ್ಮಯ್ಯನವರೂ ಒಂದೆರಡು ನಿಮಿಷ ಯೋಚಿಸಿ "ಯಾಕಾಗಬಾರದೂ, ಮದುವೆಮಾಡಿದರೆ ತಪ್ಪೇನು" ಎಂದು

ಕೇಳುತ್ತಲೇ, ಸೀತಮ್ಮನವರ ಮನಸ್ಸಿಗುಂಟಾದ ತಳಮಳವನ್ನು ಹೇಳಲಾಸಲ್ಲ. "ಯಾವೊನೋ ಪರದೇಶಿ ಹುಡುಗ, ಆಸ್ತಿಪಾಸ್ತಿ ಒಂದೂ ಇಲ್ಲ—ಕುಲ ಗೋತ್ರ ಹೇಳುವಂತಿಲ್ಲ—ದಿಕ್ಕಿಲ್ಲದ ಅನಾಥನಿಗೆ ನಿಮ್ಮ ಮಗಳನ್ನು ಕೊಟ್ಟರೆ, ನಿಮ್ಮ ಹೆಸರು, ಅಂತಸ್ತಿಗೆ ತುಂಬಾ ಚೆನ್ನಾಗಿರುತ್ತೆ" ಎಂದು ಮಾತ್ರ ಟೀಕಿಸಿದರು. ಶಾಮನ ವಿಷಯದಲ್ಲಿ ತಮ್ಮಯ್ಯನವರಿಗೆ ಬಹು ಒಳ್ಳೆಯ ಅಭಿಪ್ರಾಯವಿದ್ದರೂ, ತಮ್ಮ ಗೌರವ ಅಂತಸ್ತುಗಳ ವಿಚಾರ ಬಂದಾಗ ಅವರ ಮನಸ್ಸು ಯೋಚನೆಗೆ ಒಳಗಾಯಿತು—ಸಮಾಜದಲ್ಲಿರುವ ತಮ್ಮ ಸ್ಥಾನ, ಮಾನ, ಗೌರವಗಳು, ತಮ್ಮ ಕುಲ, ಗೋತ್ರ, ವಂಶ, ಮುಂತಾದವೂ ಮನಸ್ಸಿನ ತೆರೆಯಮೇಲೆ ಹರಿಯಿತು. ಮುಂದೆ ಮಾತೇ ಹೊರಡಲಿಲ್ಲ. ಹೆಂಡತಿ ಹೇಳುವ ಮಾತಿನಲ್ಲಿ ಸತ್ಯಾಂಶವಿದೆ ಎನ್ನುವುದು ಬೇರೂರಿ, ಶಾಮನು ಕೇವಲ ನೌಕರ, ತಮ್ಮ ಮಗಳೊಂದಿಗೆ ಸಲಿಗೆಯಿಂದ ಮಾತಾಡುವುದೂ, ಜತೆಯಲ್ಲಿರುವುದೂ ಸರಿಯಲ್ಲಾ ಎಂಬ ಭಾವನೆಯು ಸಹಾ ಯೋಚನೆಗೆ ಸಿಕ್ಕಿದ್ದ ತಮ್ಮ ಮೆದುಳಿನಲ್ಲಿ ನಾಟಿತು. ಯಾರೇ ಆಗಲಿ, ಒಳ್ಳೆತನ ಗುಣಗಳು ಇದ್ದ ಮಾತ್ರಕ್ಕೆ ಸ್ಥಾನ, ಮಾನ, ಗೌರವಗಳು ಇದ್ದಂತೆ ಆಗುವುದಿಲ್ಲವೆಂದು ಅವರ ಮನಸ್ಸು ತರ್ಕಿಸಿತು.

ಮಾರನಹಳ್ಳಿಯಲ್ಲಿ ತಮ್ಮಯ್ಯನವರ ಸಂಸಾರವು ಇದ್ದಂತೆಯೇ ಪರೀಕ್ಷೆಗಳ ಫಲಿತಾಂಶವು ಹೊರಬಿದ್ದು ರಾಮುವು ಮೊದಲನೇ ತರಗತಿಯಲ್ಲಿ ಉತ್ತೀರ್ಣನಾಗಿರುವನೆಂಬ ಸುದ್ದಿ ಹಳ್ಳಿಗೆ ಬಂದು ಮುಟ್ಟಿತು. ಸೀತಮ್ಮನವರು ಅತ್ಯಂತ ಸಂತೋಷವನ್ನು ವ್ಯಕ್ತಪಡಿಸಿ, ರಾಮುವಿಗೆ ಒಳ್ಳೆ ವಿದ್ಯೆ ಕೊಡಿಸಬೇಕಂದೂ, ಅದಕ್ಕಾಗಿ ಎಷ್ಟು ಖರ್ಚಾದರೂ ಸರಿಯೆಂದೂ ಕನಿಕರಪಡುವವರಂತೆ ಎರಡು ಮೂರು ಸಲ ತಮ್ಮಯ್ಯನವರಿಗೆ ಸಲಹೆಯಿತ್ತರು. ಹೇಗಾದರೂ ಮಾಡಿ ರಾಮುವನ್ನು ಹೊರಗೆ ಕಳುಹಿಸಬೇಕೆನ್ನುವುದೇ ಅವರ ಉದ್ದೇಶವಾಗಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ—ರಾಮುವಿಗೂ ತಮ್ಮ ಮಲತಾಯಿಯ ಸವಿಮಾತುಗಳ ಒಳಗೆ ಯಾವುದೋ ಕಹಿ ಗುಳಿಗೆ ಇರಬೇಕಂದು ತಿಳಿಯದಿರಲಿಲ್ಲ. ಆದರೆ ಮುಂದಿನ ವಿದ್ಯಾಭ್ಯಾಸ ಮಾಡಬೇಕಂಬ ಹಂಬಲ ರಾಮುವಿಗೂ ಇತ್ತು. ಕಮಲಳ ಮುಂದಿನ ಗತಿ ಅವನ ಮನಸ್ಸಿಗೆ ಯೋಚನೆಯನ್ನು ಕೊಟ್ಟಿದ್ದರೂ, ಇನ್ನೂ ಕೇವಲ ಯುವಕನಾಗಿದ್ದುದರಿಂದ ವಿದ್ಯೆ ನಿಲ್ಲಿಸುವಂತಿರಲಿಲ್ಲ—

ಇದರ ಜತೆಗೆ ಕೇಳಿದ ಅಭಿಪ್ರಾಯಕ್ಕೆ ಉತ್ತರವಾಗಿ ಶಾಮು ಮತ್ತು ಕಮಲ ಇಬ್ಬರೂ ರಾಮುವನ್ನು ಮುಂದಕ್ಕೆ ಓದಿ ಪದವೀಧರನಾಗಲೇಬೇಕೆಂದು ಒತ್ತಾಯವಾಗಿ ಸೂಚಿಸಿದ್ದರು. ತಮ್ಮಯ್ಯನವರೂ ಸೀತಮ್ಮನವರ ಅಭಿಪ್ರಾಯವೇ ಸರಿಯೆಂದು ಭಾವಿಸಿ, ಎರಡನೇ ಹೆಂಡತಿಯಾದರೂ ಮಗನ ಮೇಲಿರುವ ವಿಶ್ವಾಸಕ್ಕೆ ಸಂತಸಪಟ್ಟು ರಾಮುವನ್ನು ಕಲಕತ್ತಾ ವಿಶ್ವವಿದ್ಯಾನಿಲಯಕ್ಕೆ ಕಳುಹಿಸುವ ಏರ್ಪಾಡು ಮಾಡಿದರು. ಸೀತಮ್ಮನವರ ಮಾತುಗಳೆಲ್ಲವೂ ಸಿಹಿಯಲ್ಲವೆಂದು ರಾಮುವಿಗೂ ಕಮಲಳಿಗೂ ತಿಳಿದಿದ್ದರೂ, ತಂದೆಯ ಮುಂದೆ ಹೇಳುವ ಧೈರ್ಯ ಅವರಿಗಿರಲಿಲ್ಲ—ಒಂದು ವೇಳೆ ಧೈರ್ಯದಿಂದ ತಿಳಿಸಿದರೂ ಅದಕ್ಕೆ ತಕ್ಕ ಉದಾಹರಣೆ ಕೊಟ್ಟು ತಮ್ಮಯ್ಯನವರ ಮನಸ್ಸಿಗೆ ನಿಜವೆಂದು ತೋರಿಸುವ ಚೈತನ್ಯ ಅವರಲ್ಲಿರಲಿಲ್ಲ. ವಿಶ್ವಾಸವಾಗಿರುವ ಗಂಡಹೆಂಡರಿಗೆ ಜಗಳ ತಂದಿಡಲು ಮಾಡಿದ ಕೆಲಸವೆಂದು ಎಲ್ಲಿ ತಮ್ಮಯ್ಯನವರು ಮಕ್ಕಳಮೇಲೆ ತಿರುಗಿ ಬೀಳುವರೋ ಎಂದೇ ಅಣ್ಣತಂಗಿ ಹೆದರುತ್ತಿದ್ದರು—ಶಾಮನ ಅಭಿಪ್ರಾಯವೂ ಹಾಗೆಯೇ ಆಗಿತ್ತು. ೧೫ ದಿನಗಳನಂತರ ರಾಮುವು ಪ್ರಯಾಣಕ್ಕೆ ಸಿದ್ಧನಾದ. ಸೀತಮ್ಮನವರಿಗೆ ಅತ್ಯಂತ ಹರ್ಷವಾಯಿತು. ತಮ್ಮ ಮನಸ್ಸಿನ ಸಂತೋಷವನ್ನು ವ್ಯಕ್ತಪಡಿಸಲು ಅಂದು ಹಬ್ಬದೂಟವನ್ನೇ ಮನೆಯವರಿಗೆಲ್ಲಾ ಮಾಡಿಸಿದರು. ತಮ್ಮಯ್ಯನವರಿಗೆ ಮಾತ್ರ, ಮಗನು ಹೊರಟುಹೋಗುವನಲ್ಲಾ ಎಂದು ಮಲತಾಯಿ ಈ ರೀತಿ ಏರ್ಪಡಿಸಿರಬಹುದೆಂದು ತೋರಿತು. ಅವರ ಅಭಿಪ್ರಾಯವೂ ತಪ್ಪಲ್ಲ—ರಾಮುವು ಸಧ್ಯ ಹೊರಟುಹೋಗುತ್ತಾನಲ್ಲಾ ಎಂದೇ ಸೀತಮ್ಮನವರು ಹರ್ಷದಿಂದ ಹಬ್ಬದೂಟವನ್ನು ಮಾಡಿಸಿದ್ದರು.

೬

ರಾಮುವು ಕಲಕತ್ತೆಗೆ ಹೋಗಿ ೧೦ ದಿನಗಳಾಗಿತ್ತು. ಮೂರು ಹೊತ್ತೂ ತನ್ನ ಮಾತುಗಳಿಂದ, ಹಾಸ್ಯದಿಂದ, ವಿಶ್ವಾಸದಿಂದ, ಕಾಲವನ್ನು ಮುಂದೋಡಿಸುತ್ತಿದ್ದ ಅಣ್ಣನ ಅಗಲಿಕೆಯು ಕಮಲಳಿಗೆ ಬೇಸರವನ್ನುಂಟುಮಾಡಿತು—ಒಂದು ದಿನ ಕಳೆಯಬೇಕಾದರೆ ಒಂದು ಯುಗದಂತೆ ಭಾಸವಾಗುತ್ತಿತ್ತು. ಅವಳಿಗೆ ಹಳ್ಳಿಯಲ್ಲಿ ಹೆಚ್ಚು ಮಂದಿ ಸ್ನೇಹಿತರಿರಲಿಲ್ಲ—ಯಾರ ಮನೆಗೂ

ಹೋಗುವ ಅಭ್ಯಾಸವೂ ಅವಳಿಗಿರಲಿಲ್ಲ. ಯಾಕೆಂದರೆ, ಹಳ್ಳಿಯವರೆಲ್ಲಾ ಅವಳನ್ನು ಕಂಡರೆ ಇಷ್ಟು ದೊಡ್ಡ ಹುಡುಗಿಗೆ ಇನ್ನೂ ವಿವಾಹವಾಗಿಲ್ಲವೇ ಎಂದು ಮೂಗಿನಮೇಲೆ ಬೆರಳನ್ನಿಡುತ್ತಿದ್ದರು. ಶಾಮನಾದರೋ ವಾರಕ್ಕೆ ಕೇವಲ ಒಂದೆರಡು ದಿನ ಮಾತ್ರ ಮಾರನಹಳ್ಳಿಯಲ್ಲಿರುತ್ತಿದ್ದ. ಉಳಿದ ದಿನಗಳೆಲ್ಲಾ ಅವನಿಗೆ ಮಂಗಳೂರಿನಲ್ಲೇ ಸಾಕಷ್ಟು ಕೆಲಸವಿರುತ್ತಿತ್ತು. ರಾಮು ವು ಇಲ್ಲದುದರಿಂದ, ಹೊತ್ತು ಕಳೆಯಲು ಅನುಕೂಲವಾಗುವಂತೆ ಕಮಲ ಳಿಗೆ ಅವಳ ಇಷ್ಟದಂತೆ ಬೇಕಾದ ಪುಸ್ತಕಗಳನ್ನೂ, ಪತ್ರಿಕೆಗಳನ್ನೂ, ಕಸೂತಿ ಸಾಮಾನುಗಳನ್ನೂ ರಾಮನು ಮಂಗಳೂರಿಂದ ಬರುವಾಗಲೆಲ್ಲಾ ತರುತ್ತಿದ್ದ. ಇವುಗಳೆಲ್ಲಾ ಸೀತಮ್ಮನವರ ಕಣ್ಣಿಗೆ ಬೀಳದಿರಲಿಲ್ಲ—ಅವರು ಮನಸ್ಸಿನಲ್ಲೇ ಉರಿದುಬೀಳುತ್ತಿದ್ದರು. ತಮ್ಮಯ್ಯನವರಿಗೂ ಈ ವಿಷಯಗಳೆಲ್ಲಾ ಅವರಿಂದ ವಿಶದವಾಗಿ ವರದಿಮಾಡಲ್ಪಟ್ಟಿದ್ದವು. ಸಮಯ ಸಿಕ್ಕಾಗಲೆಲ್ಲಾ ಸೀತಮ್ಮ ನವರು ಕಮಲಳಿಗೆ ಉಪದೇಶ ಮಾಡಲುಪಕ್ರಮಿಸಿದರು. ಮೊದಲಿಗಿಂತಲೂ ಹೆಚ್ಚಾಗಿ ವಿಶ್ವಾಸ ತೋರುವವರಂತೆ ನಟಿಸುತ್ತಾ, ಕೇವಲ ಒಬ್ಬ ಗುಮಾಸ್ತ ನೊಂದಿಗೆ ಸಲಿಗೆಯಿಂದ ವರ್ತಿಸುವುದು ಅವಳ ಸ್ಥಾನ ಮಾನಕ್ಕೆ ತಕ್ಕುದಲ್ಲ ವೆಂದೂ, ಈ ವಿಷಯದಲ್ಲಿ ಅವಳ ತಂದೆಗೂ ತುಂಬಾ ಯೋಚನೆಯಾಗಿದೆ ಯೆಂದೂ ಅನೇಕ ವೇಳೆ ಕಮಲಳಿಗೆ ಮೃದು ಮಾತುಗಳಿಂದ ತಿಳಿಸಿದರು. ಶಾಮನು ಒಬ್ಬ ಗುಮಾಸ್ತ—ಸಾಮಾನ್ಯ ವ್ಯಕ್ತಿ—ಜತೆಗೆ ಪರದೇಶಿ ಎಂಬುದೇ ಸೀತಮ್ಮನವರಿಂದ ಕಮಲಳು ಕೇಳುತ್ತಿದ್ದ ವಾಕ್ಯಗಳು. ಹೀಗೆ ಒಂದೆ ರಡು ವಾರ ಉಪದೇಶದಲ್ಲಿ ಕಳೆದಮೇಲೆ ಸೀತಮ್ಮನವರು ಮತ್ತೊಂದು ಹೊಸ ಪ್ರಯೋಗವನ್ನು ನಡೆಸಿದರು. ಕಮಲಳನ್ನು ಕರೆಸಿಕೊಂಡು, ಶಾಮನು ಹಳ್ಳಿಯಲ್ಲಿರುವ ಯಾವುದೋ ಒಬ್ಬ ಸಾಮಾನ್ಯ ಹುಡುಗಿ ಯನ್ನು ಪ್ರೀತಿಸುತ್ತಿರುವನೆಂದೂ, ಅವನ ನಡೆವಳಿಕೆ ಸರಿಯಿಲ್ಲವೆಂದೂ ಹೇಳಿ, ಶಾಮನು ಆ ಊರಿನ ಪಟೇಲರ ಮಗಳೊಂದಿಗೆ ಮಾತಾಡುವಂತಹ ಸನ್ನಿವೇಶವನ್ನು ಏರ್ಪಡಿಸಿ, ಕಮಲಳಿಗೆ ಅದನ್ನು ತೋರಿಸಿದರು. ಕಮಲ ಳಿಗೆ ಸೀತಮ್ಮನವರ ಹೃದಯ, ಗುಣ ತಿಳಿದಿದ್ದರೂ ಶಾಮನು ಪಟೇಲರ ಹುಡುಗಿಯೊಂದಿಗೆ ಮಾತಾಡಿದ್ದು ಸರಿತೋರಲಿಲ್ಲ. ಅವನು ಯಾತಕ್ಕೆ ಮಾತಾಡಿದ, ಸಂದರ್ಭವೇನು ಎಂದಾದರೂ ವಿಚಾರಿಸಬೇಕಾಗಿತ್ತು—

ಅವಳು ಅದನ್ನೂ ಮಾಡಲಿಲ್ಲ. ಮನಸ್ಸಿನಲ್ಲಿಯೇ ಕೊರಗಲಾರಂಭಿಸಿದಳು. ಎಂದಿನಂತೆ ಶಾಮನ ಮಾತು, ಸಂಭಾಷಣೆ, ಅವಳಿಗೆ ಬೇಕಾಗದೆ ಬೇಸರವನ್ನುಂಟುಮಾಡುತ್ತಿತ್ತು. ಕಮಲಳಲ್ಲಿ ಆಗಿರುವ ಬದಲಾವಣೆ ಶಾಮನಿಗೆ ತಿಳಿದಮೇಲೆ ಒಂದು ದಿನ ಅವಳು ತನ್ನ ಕೊಠಡಿಯಲ್ಲಿ ಕುಳಿತಿರುವಾಗ ಹೋಗಿ ಯಾತಕ್ಕೆ ಹಾಗಿರುವಳೆಂದು ವಿಚಾರಿಸಿದ. ಇವರಿಬ್ಬರೂ ಮಾತಾಡುವುದನ್ನು ತಮ್ಮಯ್ಯನವರಿಗೆ ಸೀತಮ್ಮನವರು ತೋರಿಸಿ, ಹೀಗೆ ಬೆಳೆದ ಹುಡುಗ ಹುಡುಗಿ ಕೋಣೆಯಲ್ಲಿ ಸೇರಿಕೊಂಡು ಮಾತಾಡುವುದು ಸರಿಯೇ ಎಂದು ಪ್ರಶ್ನಿಸಿದರು. ತಮ್ಮಯ್ಯನವರು ಮಾತಾಡದೆ ಸುಮ್ಮನೆ ಹಿಂದಿರುಗಿದರು. ಎಷ್ಟು ಪ್ರಶ್ನಿಸಿದರೂ ಶಾಮನಿಗೆ ಕಮಲಳ ಬದಲಾವಣೆಯ ಕಾರಣ ತಿಳಿಯಲಿಲ್ಲ ಅಂದಿನ ರಾತ್ರಿ ಊಟಕ್ಕೆ ಕುಳಿತಾಗ ತಮ್ಮಯ್ಯನವರು ಎಂದಿನಂತೆ ಮಾತಾಡದೆ ಪಕ್ಕದಲ್ಲಿ ಕುಳಿತಿದ್ದ ಶಾಮನನ್ನು ತೀಕ್ಷ್ಣದೃಷ್ಟಿಯಿಂದ ನೋಡಿ ಕಮಲಳನ್ನು ಯಾವ ದೃಷ್ಟಿಯಿಂದ ನೋಡುತ್ತಿರುವುದಾಗಿ ಪ್ರಶ್ನಿಸಿದರು. ಶಾಮನಿಗೆ ಅವರ ಮಾತು ಅರ್ಥವಾಗಲಿಲ್ಲ. ಸಹಜವಾಗಿ ಅವನ ಮನಸ್ಸಿನಲ್ಲಿದ್ದುದನ್ನು ಹೊರಗೆಡಹಿದ. ತಮ್ಮಯ್ಯನವರ ಪ್ರಶ್ನೆಗೆ "ಯಾವ ದೃಷ್ಟಿ ಎಂದು ಹೇಗೆ ಹೇಳಲಿ" ಎಂದ. ತಮ್ಮಯ್ಯನವರ ಮನಸ್ಸಿಗೆ ಈ ಉತ್ತರವು ನಾನಾ ಅರ್ಥವನ್ನು ಕೊಟ್ಟಿತು. "ಹಾಗಲ್ಲಾ—ಬಹಳ ಸಲಿಗೆಯಿಂದ ನೀವಿಬ್ಬರೂ ಮಾತಾಡುವುದನ್ನು ಕಂಡು ಹಾಗೆ ಕೇಳಿದೆ—ಯಾರಾದರೂ ನೋಡಿದರೆ ಏನನ್ನುತ್ತಾರೆ" ಎಂದರು. ಶಾಮನಿಗೆ ಊಟ ಸೇರಲಿಲ್ಲ. ಮನಸ್ಸೆಲ್ಲ ತಳಮಳ ಹೊಂದಿತು. ಎಂದೂ ಇಲ್ಲದ ಈ ವಿಷಯ ಈ ದಿನವೇಕೆ ಬಂದಿತು ಎನ್ನುವುದು ಯೋಚಿಸಿದರೂ ತಿಳಿಯಲಿಲ್ಲ. ಕಮಲಳ ವರ್ತನೆಗೂ ಇದೇ ಕಾರಣವಿರಬಹುದೇ ಎಂದು ಅವನಿಗೆ ಅನುಮಾನವುಂಟಾಯಿತು. ತಮ್ಮಯ್ಯನವರ ಮನಸ್ಸೂ ಬದಲಾಯಿಸಿದೆ ಎನ್ನುವುದು ಅವನಿಗೆ ದೃಢವಾದ ಮೇಲೆ ಇನ್ನು ಅಲ್ಲಿರಲು ತನಗೆ ಸ್ಥಾನವಿಲ್ಲ ಎಂದು ಭಾವಿಸಿದ. ತಮ್ಮಯ್ಯನವರು ಹೆಚ್ಚಿಗೆ ಯಾವ ಮಾತನ್ನೂ ಆಡಲಿಲ್ಲ. ಅಂದಿನ ರಾತ್ರಿಯೇ ಶಾಮನು ಮಂಗಳೂರಿಗೆ ಹಿಂದಿರುಗಿದ. ಹೋಗುವಾಗ ಕಮಲಳನ್ನು ಮತ್ತೊಮ್ಮೆ ಮಾತಾಡಿಸೋಣವೆಂದು ಬಹಳ ಹೊತ್ತು ಕಾದರೂ, ಸೀತಮ್ಮನವರ ಸರ್ಪದೃಷ್ಟಿಯಿದ್ದುದರಿಂದ ಸಾಧ್ಯವಾಗಲಿಲ್ಲ. ಹಳ್ಳಿಯನ್ನು ಬಿಟ್ಟು ಪಟ್ಟಣಕ್ಕೆ

ಬಂದರೂ ಶಾಮನ ಒಳತೊಂಟಿ ಕಮ್ಮಿಯಾಗಲಿಲ್ಲ. ಇಷ್ಟು ದಿನಗಳೂ ಬಹಳ ವಿಶ್ವಾಸದಿಂದ ನೋಡುತ್ತಿದ್ದ ತಮ್ಮಯ್ಯನವರು ಮನಸ್ಸನ್ನು ಬದಲಾಯಿಸ ಬೇಕಾದರೆ ಸೀತಮ್ಮನವರೇ ಕಾರಣವೆಂದು ಯೋಚಿಸಿದ. ಆದರೆ ಕಮಲಳ ವರ್ತನೆಗೆ ಅವನು ಉತ್ತರ ಕಂಡುಹಿಡಿಯಲಾರದೆ, ಮರುಗುವುದೇ ಅವನ ಕಸಬಾಯಿತು. ಯಾವ ಕೆಲಸವನ್ನೂ ಅವನು ಮುಂದುವರಿಸಲಾಗಲಿಲ್ಲ. ಜತೆಯಲ್ಲಿ ಕೆಲಸಮಾಡುತ್ತಿದ್ದವರು ಎಷ್ಟು ಪ್ರಶ್ನಿಸಿದರೂ ಶಾಮನು ಅವರಿಗೆ ಏನು ಹೇಳಿಯಾನು. ಪ್ರತಿನಿತ್ಯವೂ ಮಾರನಹಳ್ಳಿಯಿಂದ ಬರುತ್ತಿದ್ದ ಜವಾನರು ಒಂದು ವಾರವಾದರೂ ಕಮಲಳಿಂದ ಮೊದಲಿನಂತೆ ಸುದ್ದಿಯನ್ನು ತರಲೇ ಇಲ್ಲ. ಕಮಲಳನ್ನು ಯಾವ ದೃಷ್ಟಿಯಿಂದ ನೋಡುತ್ತಿರುವೆನೆಂಬ ಅಭಿಪ್ರಾಯ ಶಾಮನಿಗೂ ಇದುವರಿವಿಗೂ ಬಂದಿರಲಿಲ್ಲ. ತಮ್ಮಯ್ಯನವರು ಆ ದಿನ ಹಾಕಿದ ಪ್ರಶ್ನೆಯನ್ನೇ ತಾನೂ ತನ್ನ ಮನಸ್ಸಿಗೆ ಅನೇಕ ಸಾರಿ ಕೇಳಿದ. ಮನಸ್ಸು ಯಾವ ಉತ್ತರವನ್ನೂ ಹೇಳಲಿಲ್ಲ. ಅಂತೂ ಕಮಲಳನ್ನು ನೋಡ ಬೇಕು, ಮಾತಾಡಬೇಕು, ಎನ್ನುವ ಹಂಬಲ ಮಾತ್ರ ಅವನ ಮನಸ್ಸಿಗಿತ್ತು. ಶಾಮನಿಗೆ ತಿಳಿಯದೇನೇ ಅವನ ಮನಸ್ಸು, ಹೃದಯ, ಕಮಲಳ ಮಾತನ್ನು, ಸ್ನೇಹವನ್ನು, ಕೋರುತ್ತಿತ್ತು. ಈ ಒಳಜಗಳದಲ್ಲಿ, ಮನಸ್ಸಿನ ಉದ್ವೇಗದಲ್ಲಿ ಶಾಮನು ಒಂದೆರಡು ವಾರ ಕಳೆದ. ಈ ಮಧ್ಯೆ ತಮ್ಮಯ್ಯನವರು ಮೂರು ಬಾರಿ ಮಂಗಳೂರಿಗೆ ಬಂದು ಕೆಲಸಗಳೆಲ್ಲವನ್ನೂ ನೋಡಿ, ಶಾಮ ತನ್ನ ಕೆಲಸ ವನ್ನು ಎಂದಿನಂತೆ ಮಾಡಿಲ್ಲವೆಂದು ಟೀಕಿಸಿದ್ದರು. ನಿಜವಾಗಿ ಶಾಮನು ಮೊದಲಿನಂತೆ ಕೆಲಸಮಾಡಿರಲಿಲ್ಲ. ತಮ್ಮಯ್ಯನವರ ಟೀಕೆಯು ಅವನಿಗೆ ಬಹು ವ್ಯಥೆಯನ್ನುಂಟುಮಾಡಿತು. ಅಂದು ರಾತ್ರಿ ತನ್ನ ಕೋಣೆಯಲ್ಲಿ ಮಲಗಿ ನಿದ್ರೆಯನ್ನು ಸೋಲಿಸಿ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗ ಶಾಮ ನಿಗೆ ತನ್ನ ಹಿಂದಿನ ದಿನಗಳೆಲ್ಲಾ ನೆನಪಿಗೆ ಬಂದಿತು. ತಾನು ಅಲ್ಲಿಯೇ ಇದ್ದರೆ ತಮ್ಮಯ್ಯನವರಿಗೆ ಅಸಮಾಧಾನವಾಗಬಹುದು ಎಂದು ಯಾವುದೋ ದೃಷ್ಟಿ ಅವನಿಗೆ ತಿಳುವಳಿಕೆ ಕೊಟ್ಟಿತು. ಸಮುದ್ರದಲ್ಲಿ ಕೈಹಿಡಿದು ಸಹಾಯಮಾಡಿದ ತಮ್ಮಯ್ಯನವರ ಮನಸ್ಸಿಗೆ ನೋವುಂಟುಮಾಡಬಾರದೆಂದು ನಿರ್ಧರಿಸಿದ. ಮಾರನೆಯ ದಿನ ಬೆಳಗ್ಗೆ ಎದ್ದು ತನ್ನ ಕೆಲಸವನ್ನೆಲ್ಲಾ ಪೂರೈಸಿ, ತಮ್ಮಯ್ಯ ನವರು ಮಂಗಳೂರಿಗೆ ಬಂದನಂತರ ಅವರ ಬಳಿಗೆ ಹೋಗಿ, ತನ್ನ ಹತ್ತಿರವಿದ್ದ

ಲೆಕ್ಕಪುಸ್ತಕಗಳನ್ನೂ, ಹಣ ರಶೀದಿಗಳನ್ನೂ, ಸಾಮಾನು ಸರಂಜಾಮನ್ನೂ ವಿಶದವಾಗಿ ತಿಳಿಯಹೇಳಿ ಒಪ್ಪಿಸಿದ. ಎಲ್ಲವನ್ನೂ ನೋಡಿಕೊಂಡು ತಮ್ಮಯ್ಯ ನವರು "ಏನಯ್ಯಾ ಶಾಮು, ಈ ದಿವಸ ಹೀಗೆ ಮಾಡುತ್ತಿದ್ದೀ" ಎಂದು ಪ್ರಶ್ನಿಸಿದರು. ಶಾಮುನಿಗೆ ಉತ್ತರ ಹೇಳಲು ತೋಚಲಿಲ್ಲ. "ಕೆಲಸ ಬಿಡ ಬೇಕೆಂದು ಯೋಚಿಸಿದ್ದಿಯೇನು?" ಎಂದು ಪುನಃ ಕೇಳಿದರು. "ಹೌದು, ಇಲ್ಲಿ ರಲು ನನ್ನ ಮನಸ್ಸು ಒಪ್ಪುವುದಿಲ್ಲ. ನನ್ನ ಇರುವಿಕೆ ನಿಮಗೆ ತೊಂದರೆ ಉಂಟುಮಾಡಿದೆ. ನೀವು ಇದುವರೆವಿಗೂ ಮಾಡಿದ ಉಪಕಾರಕ್ಕೆ ಚಿರ ಋಣಿ" ಎಂದು ನಿಧಾನವಾಗಿ ಹೇಳಿದ. ತಮ್ಮಯ್ಯನವರಿಗೆ ಸೀತಮ್ಮನವರ ಮಾತುಗಳು ಜ್ಞಾಪಕಕ್ಕೆ ಬಂದಿತು. "ನಿನ್ನ ಇಷ್ಟ" ಎಂದು ತಿಳಿಸಿದರು. ಶಾಮುನು ಪುನಃ ಮಾರನಹಳ್ಳಿಗೆ ಹೋಗಲೇ ಇಲ್ಲ. ತಮ್ಮಯ್ಯನವರೊಬ್ಬರೇ ಆ ರಾತ್ರಿ ಗಾಡಿಯಲ್ಲಿ ಕುಳಿತು ಹಳ್ಳಿಯ ಕಡೆ ತೆರಳಿದರು.

*

# ಎರಡನೆಯ ಭಾಗ

೧

ಶಾಮನು ಮಂಗಳೂರಿಂದ ಮನೆ ಬಿಟ್ಟು ಹೊರಟಾಗ ಸಂಜೆ ೫ ಘಂಟೆಯಾಗಿತ್ತು. ಮಾರನಹಳ್ಳಿಯಲ್ಲಿ ಕೆಲವು ದಿನಗಳು ಮಾತ್ರವೇ ಇದ್ದರೂ ಅದರ ಸವಿನೆನಪು ಮರೆಯುವಂತಿರಲಿಲ್ಲ ಕಮಲಳ ವರ್ತನೆಯೂ, ಸೀತಮ್ಮನವರ ಉಪಾಯಗಳೂ ಅವನಿಗೆ ಪ್ರಪಂಚದ ಅರಿವನ್ನು ಸ್ವಲ್ಪಮಟ್ಟಿಗೆ ಮಾಡಿಕೊಟ್ಟಿದ್ದವು ಇವೆಲ್ಲಕ್ಕೂ ಮಿಗಿಲಾಗಿ ರಾಮದಾಸರು ಹೇಳಿದ ಮಾತುಗಳು ಮನಸ್ಸಿಗೆ ಪದೇ ಪದೇ ಬರುತ್ತಿತ್ತು. "ನಿನ್ನಲ್ಲಿ ಒಳ್ಳೆಯ ತತ್ವಗಳಿವೆ" ಎಂದು ದಾಸರು ಹೇಳಿದ ಉತ್ತೇಜನಕರವಾದ ಮಾತುಗಳಿಂದ ಮನಸ್ಸಿಗೆ ಒಂದು ರೀತಿಯ ಸಮಾಧಾನವಾಗಿದ್ದರೂ, "ತತ್ವಗಳಿದ್ದ ಮಾತ್ರಕ್ಕೆ ಅದರಿಂದ ಪ್ರಯೋಜನವೇನು? ತತ್ವಗಳಿಂದ ಜೀವನೋಪಾಯವು ಕೈವಶವಾಗುತ್ತದೆಯೆ?" ಎಂಬ ಸಂದೇಹ ಪ್ರಶ್ನೆಗಳು ಹೃದಯವನ್ನು ಕೊರೆಯುತ್ತಿತ್ತು. ಮುಂದೇನು ಮಾಡಬೇಕೆಂದು ಶಾಮನು ನಿರ್ಧರಿಸಿರಲಿಲ್ಲ. ಎಷ್ಟು ಯೋಚಿಸಿದರೂ ನಿರ್ಧರಿಸಲು ಸಾಧ್ಯವಾಗಲೂ ಇಲ್ಲ. ತನ್ನವರು ಎಂದು ಮರೆಹೋಗಬಹುದಾದ ಜನರು ಶಾಮನ ಜ್ಞಾಪಕದಲ್ಲಿ ಯಾರೂ ಇದ್ದಂತೆ ತೋರಲಿಲ್ಲ. ಕೆಲವು ಕಾಲ ತಮ್ಮಯ್ಯನವರ ಬಳಿ ಕೆಲಸಮಾಡಿ ದುಡಿದಿದ್ದರೂ, ಅವನಲ್ಲಿ ಹೆಚ್ಚು ಹಣವೇನೂ ಉಳಿದಿರಲಿಲ್ಲ. ಸಂಪಾದನೆ ಮಾಡುತ್ತಿದ್ದ ಮುಖ್ಯ ಭಾಗವೆಲ್ಲಾ ಬಡ ಹುಡುಗರ ವಿದ್ಯಾಭ್ಯಾಸಕ್ಕೂ, ಉಳಿದ ಸ್ವಲ್ಪ ತನ್ನ ತಂದೆ ತಾಯಿಗೆ ನೆರವಾಗಿದ್ದ ಶ್ರೀಕಂಠಯ್ಯನವರಿಗೂ ತಪ್ಪದೆ ಶಾಮನು ವಿನಿಮಯ ಮಾಡಿದ್ದ. ಕೇವಲ ಇಂಟರ್‌ಮೀಡಿಯಟ್‌ವರಿಗೆ ಓದಿ ಹೆಚ್ಚು ಪರಿಶ್ರಮವಿಲ್ಲದ ಶಾಮನಿಗೆ ದಿಕ್ಕೇ ತೋಚದಂತಾಯಿತು ರೈಲು ನಿಲ್ದಾಣವು ಸಿಗುವವರಿವಿಗೆ ಎಲ್ಲಿ ಹೋಗಬೇಕೆಂಬುದನ್ನೇ ಯೋಚಿಸುತ್ತಿದ್ದು, ಟಿಕೀಟು ತೆಗೆದುಕೊಳ್ಳುವ ಪ್ರಸಂಗ ಬಂದಾಗ, ತಾನು ಓದಿ, ಬಾಳಿದ್ದ ಮದರಾಸಿಗೇ ಪುನಃ ಹೋಗೋಣವೇ ಎನ್ನಿಸಿತು. ಕಿಟ್ಟುವಿನ ಸ್ನೇಹಕ್ಕೆ ಪುನಃ ಒಳಗಾಗಿ ಅಜನ್ಮಪರಿಯಂತರ ಅವನ ಋಣದಲ್ಲಿರಲು ಮನಸ್ಸಿಲ್ಲದಿದ್ದರೂ ಬೇರೆ ಹೋಗಲು

ದಾರಿಯಿರಲಿಲ್ಲವಾದ್ದರಿಂದ ಮದರಾಸಿಗೆ ಪ್ರಯಾಣವೆಂದು ನಿರ್ಧರಿಸಿದ. ರೈಲು ಬಂಡಿಯನ್ನು ಹತ್ತಿ ಕುಳಿತಮೇಲೆ ಶಾಮನ ಮೆದಳು ನಾನಾ ಬಗೆಯಲ್ಲಿ ಯೋಚನೆಮಾಡಲು ಪ್ರಾರಂಭಿಸಿತು. "ಪ್ರಪಂಚದಲ್ಲಿ ಬದುಕುವುದು—ಹಣ ಗಳಿಸುವುದು, ಅವರವರ ಕೈಯಲ್ಲಿದೆ" ಎಂಬ ವಾಕ್ಯವನ್ನು ಶಾಮನು ಅನೇಕ ಬಾರಿ ಕೇಳಿದ್ದ—"ಅದು ನಿಜವೇ" ಎನ್ನಿಸಿತು ಗಾಡಿಯು ಮುಂದೆ ಹೋದ ಹಾಗೆಲ್ಲ. ಕೇವಲ ೧೫-೨೦ ಮೈಲುಗಳ ಪ್ರಯಾಣ ಮಾಡುವುದರಲ್ಲಿಯೇ ಬೇಸರವು ತಲೆದೋರಿತು. ೨೫ ಜನರು ಕೂರಬೇಕಾಗಿದ್ದ ಆ ಡಬ್ಬಿಯಲ್ಲಿ ಸುಮಾರು ೬೦-೭೦ ಜನ ತುಂಬಿದ್ದರು. ಈ ಅವ್ಯವಸ್ಥೆಯು ಪ್ರತಿಯೊಬ್ಬ ರಿಗೂ ತಿಳಿದಿದ್ದರೂ ಪರಿಹಾರ ಮಾತ್ರ ಏನೂ ಆಗಿಲ್ಲವೆನ್ನುವುದು ಶಾಮನು ಅಂದು ತಾನಿದ್ದ ಸ್ಥಿತಿಯಿಂದ ತಿಳಿದುಕೊಂಡ. ಹೀಗೆ ೬೦ ಜನ ತುಂಬಿಕೊಂಡಿ ದ್ದರೂ, ಮಿಕ್ಕವರು ಕೊಟ್ಟಷ್ಟೇ ಹಣವನ್ನು ತೆತ್ತಿದ್ದ ಒಬ್ಬಿಬ್ಬರು ಮಾತ್ರ ನಿರಾತಂಕವಾಗಿ, ಮಾತಾಡಿಸಲು ಬಂದವರನ್ನು ಗದರಿಸುತ್ತಾ, ನಾಲ್ಕೈದು ಜನರು ಕೂರಬಹುದಾದ ಸ್ಥಳಕ್ಕೆ ಒಬ್ಬೊಬ್ಬರಂತೆ ಮಲಗಿದ್ದರು. ಅವರನ್ನು ನೋಡಿದಾಗ "ಪ್ರಪಂಚದಲ್ಲಿ ಸುಖಪಡುವುದು ಅವರವರ ಕೈಯಲ್ಲೇ ಇದೆ" ಎನ್ನುವ ಮಾತು ನಿಜವಿದ್ದರೂ ಇರಬಹುದೆಂದು ತೋಚಿತು. ಮಲಗಿದ್ದ ದೊಡ್ಡಮನುಷ್ಯರನ್ನು ನೋಡುತ್ತಾ "ಎದ್ದು ಕುಳಿತುಕೊಳ್ಳಿ" ಎಂದು ಹೇಳಲೂ ಧೈರ್ಯ ಸಾಲದೆ, ಕಷ್ಟಪಟ್ಟು ದುಡಿದ ಹಣವನ್ನು ಕೊಟ್ಟಿದ್ದರೂ ನಿಂತುಕೊಂಡೇ ಪ್ರಯಾಣಮಾಡುತ್ತಿದ್ದ ಮಿಕ್ಕವರನ್ನು ನೋಡಿದಾಗಲಂತೂ ಶಾಮನಿಗೆ ಒಂದು ದೊಡ್ಡ ಪಾಠವೇ ಕಲಿತಂತಾಯಿತು. "ಪ್ರಪಂಚದಲ್ಲಿ ಸುಖ ಪಡುವುದು ಅವರವರ ಕೈಯಲ್ಲಿ ಇದ್ದರೂ, ಇತರರು ಪಡುವ ಕಷ್ಟದಿಂದಲೇ ಅದು ಸಾಧ್ಯ. ಒಬ್ಬರನ್ನು ಸುಖಪಡಿಸಲು ಹತ್ತು ಮಂದಿ ಕಷ್ಟಪಡಬೇಕು" ಎಂಬ ಪ್ರಶ್ನೆಗೆ ಅವನ ಹೃದಯ ಸಮರ್ಪಕವಾದ ಉತ್ತರವನ್ನು ಕೊಡಲಿಲ್ಲ. ಒಟ್ಟಿನಲ್ಲಿ, "ಯಾರಾದರೂ ಸುಖವಾಗಿದ್ದಾರೆ—ಬೇಕಾದಷ್ಟು ಹಣ ಗಳಿ ಸಿದ್ದಾರೆ, ಅವರಿಗೆ ಯಾವ ಯೋಚನೆಯೂ ಇಲ್ಲ" ಎಂದು ಬೆರಳುಮಾಡಿ ತೋರಿಸಿದರೆ, ಆ ಮನುಷ್ಯನ ಮುಖದಲ್ಲಿ ಎಷ್ಟೋ ಜನರ, ಸಂಸಾರಗಳ, ಪ್ರಾಣಿಗಳ ಸುಖವನ್ನು ತುಳಿದಿರುವ ಕಳೆ ಕಾಣಬಹುದೆಂದು ಶಾಮನು ಆಲೋಚಿಸಿದ. ಈ ಆಲೋಚನಾ ಲಹರಿ ಅವಿಚ್ಛಿನ್ನವಾಗಿ ಶಾಮನ ತಲೆಯಲ್ಲಿ

೧೫-೨೦ ಘಂಟೆಗಳ ಕಾಲ ಹರಿಯಿತು. ಪ್ರಪಂಚದಲ್ಲೆಲ್ಲಾ ಹೀಗೇ ನಡೆಯು ತ್ತದೆಯೆ, ನ್ಯಾಯಾನ್ಯಾಯಗಳಿಗೆ ಭೇದವಿಲ್ಲವೆ ಎಂದು ಮನಸ್ಸಿನಲ್ಲಿ ಚರ್ಚಿಸುತ್ತಿರುವಾಗಲೇ ಮದರಾಸು ಪಟ್ಟಣಕ್ಕೆ ರೈಲು ಬಂಡಿಯು ತಲುಪಿತು.

ಶಾಮನಿಗೆ ಇದ್ದ ಆಸ್ತಿಯಲ್ಲಿ ಒಂದು ಹಾಸಿಗೆ, ಒಂದು ಟ್ರಂಕು—ಅದರ ಲ್ಲಿಯೇ ಅವನಿಗೆ ಬೇಕಾದ ಹಲವು ಪುಸ್ತಕಗಳನ್ನೂ ಬಟ್ಟೆಗಳನ್ನೂ ಸೇರಿಸಿದ್ದ. ರೈಲಿನಿಂದ ಇಳಿದಮೇಲೆ ಮುಂದೆಲ್ಲಿ ಹೋಗಬೇಕೆಂಬುದನ್ನು ಅರಿಯದೆ ಉದ್ದಕ್ಕೆ ಕಾಣುತ್ತಿದ್ದ ರಸ್ತೆಯಲ್ಲಿ ಹೆಜ್ಜೆಹಾಕಲು ಪ್ರಯತ್ನಿಸಿದ. ಸದ್ಯಕ್ಕೆ ಯಾವುದಾ ದರೂ ಹೋಟೆಲಿನಲ್ಲಿ ಊಟವನ್ನು ಮಾಡಿ, ಕೆಲಸವನ್ನು ಹುಡುಕಬೇಕೆಂದು ಆಲೋಚಿಸುತ್ತಾ ನಡೆಯುತ್ತಿದ್ದಾಗ ಹಿಂದಿನಿಂದ ಕಿಟ್ಟುವು ಅವನ ಬೆನ್ನು ತಟ್ಟಿದ, ಶಾಮನಿಗೆ ಏನು ಮಾತಾಡಬೇಕೆನ್ನುವುದೇ ತಿಳಿಯಲಿಲ್ಲ "ಯಾಕೋ ಕೆಲಸ ಬಿಟ್ಟೆಯೇನೋ—ಇಷ್ಟು ದಿನಕ್ಕೆ ಒಂದು ಕಾಗದವನ್ನಾದರೂ ಬರೆಯ ಬೇಡವೇ ಒಳ್ಳೇ ಸ್ನೇಹಿತ ಕಣಯ್ಯಾ" ಎಂದು ಶಾಮನನ್ನು ತನ್ನ ಕೊಠಡಿಗೆ ಕರೆದುಕೊಂಡುಹೋಗಿ ಕುರ್ಚಿಯೊಂದರಮೇಲೆ ಕೂರಿಸಿದ. ಹಲವು ವರ್ಷ ಗಳ ಹಿಂದೆ ಶಾಮು, ಕಿಟ್ಟು ಇಬ್ಬರೂ ಒಟ್ಟಿಗೇ ಓದಿದ್ದ ಕೋಣೆಯೇ ಅದು. ಕಾಲವು ಮುಂದೆ ಹೋಗಿದ್ದರೂ ಕೊಠಡಿಯಲ್ಲಿ ಹೆಚ್ಚು ಬದಲಾವಣೆಯಾಗಿರ ಲಿಲ್ಲ. ಒಂದೆರಡು ಕುರ್ಚಿಗಳೂ, ಕೆಲವು ಪುಸ್ತಕಗಳೂ ಮಾತ್ರ ಹೊಸದಾಗಿ ಸೇರಿದ್ದವು. "ಏಳೋ ಸ್ನಾನಮಾಡು" ಎಂದು ಕಿಟ್ಟುವು ಗಡಿಬಿಡಿ ಮಾಡಿ, ಹಸಿದಿದ್ದ ಮಿತ್ರನನ್ನ ಊಟಕ್ಕೆಬ್ಬಿಸಿದ. ಊಟಮಾಡುತ್ತಿರುವಾಗ ಕಿಟ್ಟುವು ಶಾಮನನ್ನು ಚೆನ್ನಾಗಿ ದೃಷ್ಟಿಸಿ ನೋಡಿ "ಏನಮ್ಮಾ, ಬಹಳ ಸೊರಗಿದಹಾಗೆ ಕಾಣ್ತೀಯಲ್ಲಾ—ಏನು ಸಮಾಚಾರ—ಕೆಲಸ ಯಾಕೆ ಬಿಟ್ಟೆ—ಮುಂದಿನ ಯೋಚನೆ ಏನು" ಎಂದು ಲೋಕಾಭಿರಾಮವಾದ ಹಲವು ಪ್ರಶ್ನೆಗಳ ಸುರಿಮಳೆ ಯನ್ನು ಕರೆಯುತ್ತಲೂ, ಶಾಮನು ನಿಧಾನವಾಗಿ ನಡೆದಿದ್ದ ವಿಷಯಗಳನ್ನೆಲ್ಲಾ ವಿವರವಾಗಿ ತಿಳಿಸಿದ. ಕಿಟ್ಟುವಿನೊಂದಿಗೆ ಮುಚ್ಚಿಡಬೇಕಾದ ವಿಷಯಗಳೇನೂ ಇರಲಿಲ್ಲ. ಅಂತಹ ಸ್ನೇಹ ಅವರಿಬ್ಬರದು. ನಡೆದ ವಿಷಯಗಳೆಲ್ಲವನ್ನೂ ವಿಶದವಾಗಿ ಹೇಳುತ್ತಿರುವಾಗಲೇ ಶಾಮನ ಕಣ್ಣುಗಳಲ್ಲಿ ನೀರು ಸೂಸಿತು. ತನ್ನಮೇಲೆ ಯಾವ ಆರೋಪವೂ, ತನ್ನಲ್ಲಿ ಯಾವ ದೋಷವೂ ಇಲ್ಲದಿ ದ್ದರೂ, ಸಮಯದಲ್ಲಿ ಕೈಹಿಡಿದು ಸಹಾಯಮಾಡಿದ ತಮ್ಮಯ್ಯನವರನ್ನು

ವಿಶ್ವಾಸದಿಂದ ನೋಡುತ್ತಿದ್ದ ಕಮಲಳನ್ನು ಬಿಟ್ಟುಬರಬೇಕಾದ ಸನ್ನಿವೇಶ ಗಳು ಒದಗಿದ್ದಕ್ಕಾಗಿ ಅವನಿಗೆ ದುಃಖವಾಯಿತು. ಹಲವು ವರ್ಷಗಳು ಕೆಲಸ ಮಾಡಿದ್ದರಿಂದಲೇ ಪ್ರಪಂಚ ಜ್ಞಾನವು ಚೆನ್ನಾಗಿ ಅವನಲ್ಲಿ ಬೇರೂರಿತ್ತೆಂದು ಹೇಳಬಹುದು. ಕೂಲಿಯವರು ಬಂಡವಾಳಗಾರರಿಗಿರುವ ಭೇದಭಾವಗಳು ಅವನಿಗೆ ಹೊಸದೇನೂ ಆಗಿರಲಿಲ್ಲ. ಪ್ರೇಮ, ವಿಶ್ವಾಸ, ಪ್ರೀತಿ ಇವುಗಳಿಗಿರುವ ವ್ಯತ್ಯಾಸಗಳು ಚೆನ್ನಾಗಿ ಪರಿಚಿತವಾಗಿತ್ತು—ಹಣ, ದಾರಿದ್ರ್ಯ, ತನ್ನ ಸುಖ ಕ್ಕಾಗಿ ಇತರರಿಗೆ ಕಷ್ಟ ಒದಗಿಸಬೇಕೆಂಬ ದುರಭಿಲಾಷೆ, ಮುಂತಾದುವು ಶಾಮ ನಿಗೆ ತಮ್ಮಯ್ಯನವರ ಮನೆಯಲ್ಲಿದ್ದುದರಿಂದ ಕರತಲಾಮಲಕವಾಗಿದ್ದವು. ಚಿಕ್ಕಂದಿನಿಂದಲೂ ಕಷ್ಟದಲ್ಲೇ ಬೆಳೆದು, ಅವರಿವರು ಕೊಡುವ ಸಹಾಯಕ್ಕೆ ಕೈ ನೀಡಿ, ವಿದ್ಯಾಭ್ಯಾಸಮಾಡಿ, ತಂದೆತಾಯಿಯಿಲ್ಲದೆ, ಯಾವುದೋ ಸಂಸಾರ ವೊಂದರಲ್ಲಿ ಬಾಳಿ, ಅಲ್ಲಿನ ರೋಗರುಜಿನ, ಮೋಸತಂತ್ರಗಳನ್ನು ಕಂಡು ಅನುಭವಿಸಿದ್ದ ಶಾಮನಿಗೆ ಪ್ರಪಂಚದ ವ್ಯಾಪಾರವು ಭಾವಿಸಿರುವಷ್ಟು ಸತ್ಯ ವಾದುದಲ್ಲವೆಂಬುದು ಚೆನ್ನಾಗಿ ಅರ್ಥವಾಗಿತ್ತು.

ಶಾಮನ ಬಾಯಿಂದ ವಿಷಯಗಳೆಲ್ಲವನ್ನೂ ಕಿಟ್ಟುವು ಸಾವಧಾನವಾಗಿ ಕೇಳಿದ. ತನ್ನ ಹಳೆಯ ಮಿತ್ರನಾದ ಶಾಮನೇ ಆಗಿದ್ದರೂ ಅವನಲ್ಲಿ ಈಗ ಪ್ರಪಂಚ ಜ್ಞಾನವು ಸಾಕಷ್ಟು ತುಂಬಿದೆ ಎನ್ನುವುದು ಕಿಟ್ಟುವಿಗೆ ತೋಚಿತು. ಊಟಮಾಡಿ ಕೈತೊಳೆದುಕೊಂಡನಂತರ ಕಿಟ್ಟುವು ಕೈ ಒರೆಸಿಕೊಳ್ಳುತ್ತಾ "ಆದದ್ದು ಆಯಿತು. ಮುಂದೇನು ಮಾಡಬೇಕೆನ್ನುತ್ತಿ" ಎಂದು ಪ್ರಶ್ನಿಸಿದ. ಮುಂದೇನು ಮಾಡಬೇಕೆನ್ನುವುದನ್ನ ಶಾಮ ಇನ್ನೂ ನಿರ್ಧರಿಸಿರಲಿಲ್ಲ. "ನೀನು ಓದಬೇಕಾಗಿತ್ತು ಶಾಮು. ಮಧ್ಯದಲ್ಲಿ ಬಿಟ್ಟಿದ್ದು ತುಂಬಾ ತಪ್ಪು." ಕಿಟ್ಟುವೆ ಮಾತನ್ನು ಮುಂದುವರಿಸುತ್ತಲೂ ಶಾಮನು "ನನಗೆ ಓದಲು ಇಷ್ಟವಿಲ್ಲದುದ ರಿಂದಲೇ ಬಿಟ್ಟದ್ದು ಕಿಟ್ಟು. ಇನ್ನು ಓದುವುದು ಸಾಧ್ಯವಿಲ್ಲ" ಎಂದು ಉತ್ತರ ವಿತ್ತ. "ಮತ್ತೇನು ಮಾಡಬೇಕು ಶಾಮು. ಎಂದಿನಂತೆ ಯಾವುದಾದರೂ ಕೆಲಸ ಹುಡುಕಬೇಕು ತಾನೆ." ಕಿಟ್ಟುವು ಪುನಃ ಪ್ರಶ್ನಿಸಿದ. "ನಿಜ. ಕೆಲಸ ವನ್ನೇನೋ ಹುಡುಕಬೇಕು. ಆದರೆ ಯಾವುದಾದರೂ ಜನರಿಗೆ ಉಪಯುಕ್ತ ವಾಗುವ ಕೆಲಸ ನೋಡುತ್ತೇನೆ" ಎಂದು ಶಾಮನು ಹೇಳಿದ. ಕಿಟ್ಟುವಿಗೆ ನಗು ಬಂದಿತು. "ಜನರಿಗೆ ಉಪಯುಕ್ತವಾಗುವ ಕೆಲಸವಾದರೆ, ನಿನ್ನ ಹೊಟ್ಟೆ

ತುಂಬಬೇಕಲ್ಲ" ಎಂದು ಕೇಳಿದ. "ಎರಡೂ ಆಗಬೇಕು ಕಿಟ್ಟು—ನೋಡೋಣ ಅಂತಹ ಕೆಲಸ ಸಿಗುತ್ತೇನೋ" ಶಾಮನು ಸಿಗಬಹುದೆಂಬ ಭರವಸೆಯಿಂದ ತಿಳಿಸಿದ. ಕಿಟ್ಟುವು ಮುಗುಳ್ನಗೆ ನಗುತ್ತಾ "ಸಂತೋಷ, ನಿನಗೆ ಜಯ ಲಭಿಸಲಿ. ಆದರೆ ನಿನ್ನ ಪ್ರಯತ್ನಗಳು ಫಲಿತಾಂಶ ಹೊಂದುವವರೆಗೂ ನೀನು ಮಾತ್ರ ಇಲ್ಲೇ ಇರಬೇಕೊ" ಎಂದು ಶಾಮನು ಮುಂದೆ ಅಲ್ಲಿ ಇರುವ ವಿಷಯ ವನ್ನು ನಿರ್ಧರಿಸಿದ. ಕಿಟ್ಟು ಪುನಃ ಪರೀಕ್ಷೆಗೆ ಕುಳಿತು ತೇರ್ಗಡೆ ಹೊಂದಿದ್ದು ದರಿಂದ, ಮುಂದಿನ ವ್ಯಾಸಂಗವನ್ನು ಮಾಡಿ, ಈಗ ಯಾವುದೋ ಒಂದು ಶಾಲೆಯಲ್ಲಿ ಪ್ರಯೋಗಗಳನ್ನು ನಡೆಸುತ್ತಿದ್ದ. ಆದ್ದರಿಂದ ಅವನ ಜತೆಯ ಲ್ಲಿರಲು ಅಭ್ಯಂತರವಿಲ್ಲವೆಂದು ಶಾಮನು ಭಾವಿಸಿ, ಹೋಗಲು ಬೇರೆ ಯಾವ ಸ್ಥಳವೂ ಇರಲಿಲ್ಲವಾದ್ದರಿಂದ, ಪುನಃ ಅದೇ ಕೋಣೆಯಲ್ಲಿ ಬಂಧುಗಳಿಗಿಂತ ಹೆಚ್ಚಾಗಿ ವಿಶ್ವಾಸವಾಗಿದ್ದ ಮಿತ್ರನೊಂದಿಗೆ ಇರಲು ಒಪ್ಪಿದ. ಮಿತ್ರರಿಬ್ಬರೂ ಮಾತಾಡುತ್ತಿದ್ದಾಗಲೇ ಅಂಚೆಯವನು ಲಕೋಟೆಯೊಂದನ್ನು ತಂದು ಕಿಟ್ಟು ವಿನ ಕೈಗೆ ಒಪ್ಪಿಸುತ್ತಲೂ ಅವನ ಮುಖವು ಅರಳಿತು. "ಏನೊ ಮದುವೆ ಆಯಿತೇನೋ" ಶಾಮನು ಕಿಟ್ಟುವಿನ ಮುಖವನ್ನು ನೋಡಿ ಪ್ರಶ್ನಿಸಿದ. "ಆಯಿತಪ್ಪಾ ಆಯ್ತು. ಆಗಲೇ ಒಂದು ವರ್ಷವಾಗ್ತಾ ಬಂತು." ಕಿಟ್ಟುವು ಉತ್ತರ ಕೊಡುತ್ತಲೂ "ನನಗೆ ತಿಳಿಸಲೇ ಇಲ್ಲವಯ್ಯಾ ನೀನು" ಎಂದು ಶಾಮನು ಕೇಳಿದ ಕಿಟ್ಟುವಿಗೆ ಆಶ್ಚರ್ಯವಾಯಿತು. ಮಿತ್ರನಿಗೆ ಲಗ್ನ ಪತ್ರಿಕೆ ಕಳುಹಿಸಿ, ಜತೆಗೆ ಕಾಗದವೊಂದನ್ನು ಬರೆದಿದ್ದ. ಆದರೆ ಶಾಮನು ಮಂಗಳೂರಿಗೂ, ಮಾರನಹಳ್ಳಿಗೂ ಓಡಾಡುತ್ತಿದ್ದುದರಿಂದ ಅದು ಅವನ ಕೈಗೆ ತಲುಪಿರಲಿಲ್ಲ. "ಒಳ್ಳೆ ಬುದ್ಧಿವಂತ. ಲಗ್ನಪತ್ರಿಕೆ ಜತೆಗೆ ಮೊಳದುದ್ದ ಕಾಗದ ಬರೆದಿದ್ದೆ. ಉತ್ತರ ನೀನೇ ಬರೆಯಲಿಲ್ಲ." ಕಿಟ್ಟುವು ಟೀಕಿಸು ತ್ತಲೂ, ಶಾಮನು ಮಾತನ್ನು ಮುಂದುವರಿಸದೆ, ತಪ್ಪು ತನ್ನದೇ ಇರಬಹು ದೆಂದು ಊಹಿಸಿದ. "ಹೋಗಲಿ ಹುಡುಗಿ ಹೇಗಿದೆ. ಮುಂಚೆ ನೋಡಿದ್ಯಾ" ಎಂದು ಶಾಮನು ಕಿಟ್ಟುವಿಗೆ ಪ್ರಿಯವಾದ ವಿಷಯಗಳನ್ನು ಕೇಳತೊಡಗಿದ. "ನೋಡಿರಲಿಲ್ಲವಯ್ಯಾ—ನೋಡೇ ಇರಲಿಲ್ಲ" ಎಂದು ಕಿಟ್ಟುವು ತಿಳಿಸಿದ ಮೇಲೆ, ಆಶ್ಚರ್ಯದಿಂದ ಶಾಮನು ಪ್ರಶ್ನಿಸಿದ.

"ಮತ್ತೆ ನೋಡದೆ ಇದ್ದರೆ, ಹೇಗಾಯಿತು?"

"ನನ್ನ ತಾಯಿತಂದೆ ನೋಡಿದ್ದರು—ಒಪ್ಪಿದರು—ಸರಿ, ನನಗೆ ಬರೆದು ಊರಿಗೆ ಕರೆಸಿಕೊಂಡು ಧಾರೆ ಮಾಡಿಸೇಬಿಟ್ಟರು."

"ಹೋಗಲಿ, ಆಮೇಲೆಯಾದರೂ ಹುಡುಗಿಯನ್ನು ನೋಡಿದೆಯಲ್ಲಾ–ಚೆನ್ನಾಗಿದ್ದಾಳೆತಾನೆ–ನಿನ್ನ ಮನಸ್ಸು ಒಪ್ಪಿತೋ ಇಲ್ಲವೋ."

"ಚೆನ್ನಾಗೇನೋ ಇದ್ದಾಳೇನ್ನು–ಆದರೆ ಇನ್ನೂ ಸುಂದರಳಾದ ಹೆಂಡತಿ ಸಿಗಬಹುದಾಗಿತ್ತು."

"ವರದಕ್ಷಿಣೆ ಏನಾದರೂ ಇತ್ತೇನೋ"

"ಅದಕ್ಕೆ ನನ್ನ ತಂದೆ ಒಪ್ಪಿದ್ದು ನಗದು ಐದು ಸಾವಿರ, ಜತೆಗೆ ನಾನು ಅಮೆರಿಕಾಗೆ ಹೋಗಿ ಬರುವ ಜವಾಬಾರಿ ಮಾವನದು"

"ಏನೋ ಕಿಟ್ಟು, ಇದು ಮಾರಿಕೊಂಡುಬಿಟ್ಟೆಯಲ್ಲೋ–ಇಷ್ಟು ವಿದ್ಯಾವಂತನಾಗಿ–ನಿನ್ನ ತಂದೆಗೆ ಹಣದ ಕೊರತೆ ಏನಿತ್ತೋ"

"ಶಾಮು, ಪ್ರಪಂಚ ನಿನಗಿನ್ನೂ ತಿಳಿಯದು. ವಿದ್ಯೆಗೂ ನಡವಳಿಕೆಗೂ ಈಗಿನ ಪ್ರಪಂಚದಲ್ಲಿ ಎಳ್ಳಷ್ಟೂ ಸಂಬಂಧವಿಲ್ಲ ನಾವು ಕಲಿಯುವ ವಿದ್ಯೆ ಬುದ್ಧಿಯಿಲ್ಲದೆ ಮಾಡಬೇಕಾದ ಕೆಲಸವೇ ವಿನಹ ಬುದ್ಧಿ ಗಳಿಸಲು ಖಂಡಿತ ಅಲ್ಲವೆನ್ನಬಹುದು." ಕಿಟ್ಟುವಿನ ಮಾತುಗಳು ಶಾಮುನ ಮನಸ್ಸಿನಮೇಲೆ ಅಚ್ಚಳಿಯದೆ ನಾಟಿತು. "ವರದಕ್ಷಿಣೆ ಕೊಡಲು ಹುಡುಗಿಯ ತಂದೆ ಎಷ್ಟು ಕಷ್ಟಪಟ್ಟಿರಬೇಕು? ಮುಂದೆ ಈ ಅಳಿಯನ ಪ್ರಯಾಣಕ್ಕೆ ಹಣ ಹೇಗೆ ಒದಗಿಸಬೇಕು. ಇದರ ಜತೆಗೆ ಒಬ್ಬರನ್ನೊಬ್ಬರು ನೋಡದಿದ್ದರೂ, ಅರ್ಥಮಾಡಿಕೊಳ್ಳದಿದ್ದರೂ ಗಂಡ ಹೆಂಡತಿಯೆಂದು ಆಜನ್ಮ ಪರಿಯಂತರ ಒಟ್ಟಿಗೆ ಇರಬೇಕು." ಈ ಯೋಚನೆಗಳು ಶಾಮುನ ಮೆದುಳನ್ನು ತಿನ್ನಲು ಪ್ರಾರಂಭಿಸಿತು. ಮರುಮಾತಾಡದೆ ಆಲೋಚನೆಗೊಳಗಾಗಿದ್ದ ಶಾಮುನನ್ನು ನೋಡಿ ಕಿಟ್ಟುವು "ಏನು ಯೋಚಿಸುತ್ತೀಯಾ ಶಾಮು, ಈಗಿನ ವ್ಯವಹಾರವೇ ಇಷ್ಟು. ಹಣವಿದ್ದಲ್ಲಿಯೇ ಅದರ ಅಭಿವೃದ್ಧಿ. ಲಕ್ಷಾಧೀಶ್ವರ ಕುಳಿತಿದ್ದ ಕಡೆಯೇ ಕೋಟಿಯ ಮೆಟ್ಟಿಲನ್ನು ಏರುತ್ತಾನೆ—ಇದರಲ್ಲಿ ಆಶ್ಚರ್ಯವೇನು? ನಾನು ಇನ್ನೂ ಇಲ್ಲಿಯೇ ಇರುವುದರಿಂದ ಪತ್ರಗಳ ಮೂಲಕ ಈಗ ಅಂದರೆ, ಮದುವೆಯಾದಮೇಲೆ ನಾವಿಬ್ಬರೂ ಚೆನ್ನಾಗಿ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ–ಇಲ್ಲದಿದ್ದರೆ ಪರಿಚಯವೂ

ಇಲ್ಲಾ, ಮಾತೂ ಇಲ್ಲಾ. ಮದುವೆಯಾದನಂತರ ಕೆಲವು ದಿನಗಳಲ್ಲೇ ಹುಡುಗಿಯನ್ನು ಕರೆದುಕೊಂಡು ಬಂದೇಬಿಡುವುದು" ಎಂದು ನಮ್ಮ ಈಗಿನ ಸಮಾಜದ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿವರಿಸಿದ. ಶಾಮುನಿಗೆ ಈ ವಿಷಯಗಳು ತಿಳಿಯದಿರಲಿಲ್ಲ. ಆದರೆ ಅದನ್ನೇ ಕುರಿತು ವಿಶದವಾಗಿ ಯೋಚಿಸಬೇಕಾದ ಸನ್ನಿವೇಶವು ಮಾತ್ರ ಹಿಂದೆಂದೂ ಬಂದಿರಲಿಲ್ಲ. ಕಿಟ್ಟುವು ನಗುತ್ತಾ ಲಕೋಟೆಯನ್ನು ಹರಿದು ಒಳಗಿದ್ದ ಕಾಗದವನ್ನು ಓದಲುಪಕ್ರಮಿಸುತ್ತಲೂ, ಶಾಮುನಿಗೆ ಪುನಃ ಯೋಚನಾಲಹರಿಯು ಆವರಿಸಿತು. "ಹುಡುಗ ತನ್ನ ಹೆಂಡತಿಯಾಗುವ ಹೆಣ್ಣನ್ನು ಸರಿಯಾಗಿ ನೋಡಿ, ಅರ್ಥಮಾಡಿಕೊಳ್ಳುವ ಮೊದಲೇ ವಿವಾಹವನ್ನು ನಿರ್ಧರಿಸುವುದು ನ್ಯಾಯವೇ? ಒಂದು ವೇಳೆ ಅನೇಕ ವರ್ಷಗಳಿಂದ ಬಳಕೆಯಿದ್ದು ಎರಡು ಮನೆಯವರಿಗೂ ಪರಿಚಯ ಯಿದ್ದರಂತೂ ಸರಿ, ಹಾಗಿಲ್ಲದ ಪಕ್ಷದಲ್ಲಿ ಗತಿ ಏನು? ಪ್ರಪಂಚವು ಇಷ್ಟು ಮುಂದುವರೆದಿದ್ದರೂ, ಹಣವಂತರೂ ಸಹ ವರದಕ್ಷಿಣೆ ಬೇಡುವುದೇಕೆ? ಸಂಸಾರದಲ್ಲಿ ಸಮಭಾಗಿನಿಯಾದ ಹೆಣ್ಣನ್ನು ಮನೆಗೆ ತಂದುಕೊಳ್ಳಲು, ವರನ ಕಡೆಯವರು ಹಣ ಕೇಳುವುದು ವಿಹಿತವೇ" ಎಂಬ ಚಿಕ್ಕ ಪುಟ್ಟ ಸಂದೇಹಗಳು ಪೀಡಿಸಲಾರಂಭಿಸಿದವು. ಕಾಗದ ಓದಿ ಜೇಬಿನಲ್ಲಿಟ್ಟುಕೊಂಡು ಕಿಟ್ಟುವು ಮಾತು ಮುಂದುವರಿಸುತ್ತಾ "ಅದು ಸರಿ, ನಿನ್ನ ವಿಷಯ ಏನು, ಇಲ್ಲಿಂದ ಹೋದನಂತರ ನಡೆದ ವಿಷಯಗಳನ್ನು ವಿಶದವಾಗಿ ಹೇಳಲೇ ಇಲ್ಲವಲ್ಲಾ" ಎಂದು ಪ್ರಶ್ನಿಸಿದ ಶಾಮುನಿಗೆ ನಗು ಬಂದಿತು. ಹೆಂಡತಿಯ ಕಾಗದವನ್ನು ಓದಿದ್ದ ಕಿಟ್ಟುವಿಗೆ ಇಷ್ಟು ಹೊತ್ತು ಕೇಳಿದ ವಿಷಯಗಳೇ ಮರೆತುದನ್ನು ನೋಡಿ, "ಎಷ್ಟು ಸಾರಿ ಹೇಳಬೇಕು. ಕಾಗದ ನಿನ್ನನ್ನು ಹಾಗೆ ಮಾಡಿದೆ" ಎಂದು ಹಾಸ್ಯಮಾಡಿದ. "ಅದಲ್ಲಯ್ಯಾ, ಮುಂದೇನು ಮಾಡುತ್ತೀ. ನಿನ್ನ ಪ್ರಯತ್ನ ಮುಗಿಯುವವರಿವಿಗೆ ಇಲ್ಲಿಯೇ ಇರುತ್ತೀ ತಾನೇ" ಎಂದು ಪ್ರತಿ ಪ್ರಶ್ನಿಸಲು, ಶಾಮನು ಮಿತ್ರನ ಮಾತಿಗೆ ಒಪ್ಪಲೇ ಬೇಕಾಯಿತು.

ಎಳೆಂಟು ದಿನಗಳು ಕಳೆದರೂ ಶಾಮುನಿಗೆ ಮದರಾಸಿನಲ್ಲಿ ಯಾವ ಕೆಲಸವೂ ಸಿಗಲಿಲ್ಲ ಬೆಳಗ್ಗೆ ಎದ್ದು ಅಲೆಯಲು ಪ್ರಾರಂಭಿಸಿದರೆ ಪುನಃ ರಾತ್ರಿಯ ಹೊತ್ತಿಗೇ ಶಾಮನು ಕೊಟಡಿಗೆ ಹಿಂದಿರುಗುತ್ತಿದ್ದರೂ, ಅವನ ಮನಸ್ಸಿಗೆ ಒಪ್ಪುವ ಕೆಲಸ ಸಿಗುವುದು ಕಷ್ಟವಾಗಿತ್ತು. ಕಿಟ್ಟುವು ತೋರಿಸಿದ

ಒಂದೆರಡು ಗುಮಾಸ್ತೆ ಕೆಲಸಗಳನ್ನು ಶಾಮನು ನಿರಾಕರಿಸಿದ್ದ. ಶಾಮನಿಗೆ ಇಷ್ಟವಿದ್ದುದು ಅವನು ಮೊದಲೇ ತಿಳಿಸಿದ್ದಂತೆ ತಾನು ಮಾಡುವ ಕೆಲಸವು ಇತರರಿಗೆ ಉಪಕಾರವಾಗುವ ಮತ್ತು ತನಗೂ ಹಣ ಸಿಗುವ ಹವ್ಯಾಸವಾಗ ಬೇಕು. ಅಂತಹ ಕೆಲಸಗಳು ಯಾವುದೂ ಎನ್ನುವುದೇ ಕಿಟ್ಟುವಿಗೆ ಅರ್ಥ ವಾಗಲಿಲ್ಲ ಸ್ನೇಹಿತನಮೇಲಿನ ವಿಶ್ವಾಸದಿಂದ ಕಿಟ್ಟುವೂ ತನ್ನ ದೇಹಶ್ರಮ ವನ್ನು ಲೆಕ್ಕಿಸದೆ ಪ್ರಯತ್ನವನ್ನು ಮುಂದುವರಿಸುತ್ತಲೇ ಇದ್ದ.

೨

ಶಾಮನು ಮದರಾಸಿಗೆ ಬಂದು ಸುಮಾರು ಹದಿನೈದು ದಿನಗಳಾದ ಮೇಲೆ ಯಾವುದೋ ಊರಿನಿಂದ ಹರಿಜನೋದ್ಧಾರಕರಲ್ಲಿ ಅಗ್ರಗಣ್ಯರೂ ಬದ್ಧಕಂಕಣರೂ ಆದ ಮಹನೀಯರೊಬ್ಬರು ಮದರಾಸಿನಲ್ಲಿ ಹರಿಜನರಿಗೆ ದೊರಕುತ್ತಿರುವ ಸೌಲಭ್ಯಗಳನ್ನು ಪರೀಕ್ಷಿಸಲು ಬರುತ್ತಾರೆಂಬ ಸುದ್ದಿ ಶಾಮನಿಗೂ ಕಿಟ್ಟುವಿಗೂ ತಿಳಿಯಿತು. ತಮಾಷೆಗಾಗಿ ಕಿಟ್ಟುವು "ಶಾಮು, ಅವರ ಹತ್ತಿರವಾದರೂ ಕೆಲಸಕ್ಕೆ ಸೇರಬಾರದೇ" ಎಂದ. ಶಾಮನು ಒಂದೆರಡು ನಿಮಿಷ ಯೋಚಿಸುತ್ತಲೂ, ನಿಜವಾಗಿಯೂ ಬರುವ ಆ ಮಹನೀಯರ ಕೈಕೆಳಗೆ ಕೆಲಸ ಸಿಕ್ಕರೆ ಯಾತಕ್ಕೆ ಹೋಗಬಾರದು ಎನ್ನಿಸಿತು ಏನೂ ಅರಿಯದ, ಪ್ರಪಂಚ ಜ್ಞಾನವಿಲ್ಲದ, ಸಮಾಜದಿಂದ ದೂರವಾದ, ಜನರಿಗೆ ತಿಳು ವಳಿಕೆಯನ್ನು ಕೊಡುವ, ಉಪಕಾರಕ್ಕೆ ಪ್ರತಿಫಲ ಮನಸ್ಸಿಗೆ ಸಂತೃಪ್ತಿ. ಇದರ ಜತೆಗೆ ತನ್ನ ಇರುವಿಕೆಗೆ ಬೇಕಾದ ಹಣ ದೊರಕುವಂತಿದ್ದರೆ ಕೆಲಸವನ್ನು ಯಾತಕ್ಕೆ ಮಾಡಬಾರದು ಎಂದು ಶಾಮನ ಮನಸ್ಸು ಒತ್ತಿ ಒತ್ತಿ ತಿಳಿಸಿತು. "ಸಿಕ್ಕರೆ ಖಂಡಿತ ಹೋಗಬಹುದು" ಎಂದು ಕಿಟ್ಟುವಿನ ಪ್ರಶ್ನೆಗೆ ಉತ್ತರ ಕೊಟ್ಟ. "ನಾನು ತಮಾಷೆಗೆ ಹೇಳಿದೆ, ಶಾಮು ಕೋಪಿಸಿಕೊಳ್ಳಬೇಡ" ಎಂದು ಕಿಟ್ಟು, ಹೇಳಿದುದನ್ನು ಕೇಳಿ, "ನಾನು ತಮಾಷೆಗೆ ಹೇಳಲಿಲ್ಲ. ಯೋಚಿಸಿ ಹೇಳಿದ್ದೇನೆ ಕೆಲಸ ಸಿಕ್ಕರೆ ಖಂಡಿತ ಮಾಡುತ್ತೇನೆ ಮತ್ತು ಅದಕ್ಕಾಗಿ ಪ್ರಯತ್ನವನ್ನೂ ನಡೆಸುತ್ತೇನೆ" ಎಂದು ಶಾಮನು ತಿಳಿಸಿದ.

ಹರಿಜನಬಂಧು ಸ್ವಾಮಿನಾಥರು ವಾಸಿಸುತ್ತಿದ್ದುದು ಬೆಂಗಳೂರಿನಲ್ಲಿ. ಅವರು ತಮ್ಮ ಜೀವಿತವೆಲ್ಲವನ್ನೂ ಕೈಕೊಂಡಿದ್ದ ಕಾರ್ಯಕ್ಕಾಗಿ ವಿನಿಯೋಗಿ

ಸಿದ್ಧರೆಂದು ಜನರೆಲ್ಲರೂ ಮಾತಾಡುತ್ತಿದ್ದರು. ಸ್ವಾಮಿನಾಥರು ಜಾತಿಯಲ್ಲಿ ಉತ್ತಮರಾಗಿದ್ದರೂ, ತಮ್ಮ ೨೫ನೇ ವಯಸ್ಸಿನಲ್ಲಿಯೇ ಯಾವುದೋ ಆಶ್ರಮಕ್ಕೆ ಹೋಗಿದ್ದಾಗ, ಅಲ್ಲಿ ನಡೆಯುತ್ತಿದ್ದ ಉಪನ್ಯಾಸವೊಂದನ್ನು ಕೇಳಿ ಮುಗ್ಧರಾಗಿ, ತಮ್ಮ ಮುಂದಿನ ಆಯುಷ್ಯವನ್ನೆಲ್ಲಾ ಯಾವುದಾದರೂ ಜನರಿಗೆ ಉಪಯುಕ್ತವಾದ ಕಾರ್ಯದಲ್ಲಿ ಕಳೆಯಬೇಕೆಂದು ನಿರ್ಧರಿಸಿದ್ದರಂತೆ. ಸ್ವಾಮಿನಾಥರ ಆಗಮನಕ್ಕಾಗಿ ಅನೇಕ ಸಿದ್ಧತೆಗಳು ಪ್ರಾರಂಭವಾದವು. ಕಿಟ್ಟು ಮಾತ್ರ ತನ್ನ ಕೆಲಸದಲ್ಲಿಯೇ ಮಗ್ನನಾಗಿದ್ದರೂ ಶಾಮನು ಸ್ವಾಮಿನಾಥರ ಕಾರ್ಯಕ್ರಮವನ್ನೇ ಅನುಸರಿಸಿ, ಅವರು ಇದ್ದ ಎರಡು ಮೂರು ದಿನಗಳೂ ನಡೆದ ಉಪನ್ಯಾಸ, ಪ್ರಚಾರ ಭಾಷಣ, ಮುಂತಾದ ಚಟುವಟಿಕೆಗಳಲ್ಲಿ ಭಾಗ ವಹಿಸಲು ಪ್ರಯತ್ನಿಸಿದ. ಶಾಮನ ಕಣ್ಣಿಗೆ ಸ್ವಾಮಿನಾಥರು ಕಂಡಿದ್ದು ಅವರು ಬಂದ ಮೂರನೆಯ ದಿನ ಹರಿಜನರ ಕೇರಿಗೆ ಭೇಟಿಕೊಟ್ಟಾಗ. ಅಂದು ಆ ಕೇರಿಯಲ್ಲಾ ಶುಭ್ರವಾಗಿ ಗುಡಿಸಲ್ಪಟ್ಟಿತ್ತು. ರಸ್ತೆಗಳಿಗೆಲ್ಲಾ ಪುಡಿ ಮಣ್ಣನ್ನು ಉದುರಿಸಿ ನೀರೆರಚಿದ್ದರು. ಕೇರಿಯ ಮಧ್ಯದಲ್ಲೇ ಚಪ್ಪರವೂ ಹಾಕಲ್ಪಟ್ಟಿತ್ತು. ಸ್ವಾಮಿನಾಥರು ಸಂಜೆ ೬ ಘಂಟೆಗೆ ಆ ಚಪ್ಪರದಲ್ಲಿ ಭಾಷಣ ಮಾಡಿದರು. ಕೇರಿಯಲ್ಲಿದ್ದ ಅಲ್ಪ ಹರಿಜನರನ್ನು ಬಿಟ್ಟರೆ, ಚಪ್ಪರವೆಲ್ಲಾ ಇತರ ಜನರಿಂದ ಭರ್ತಿಯಾಗಿತ್ತು. ಶಾಮನೂ ಸಹ ಕುತೂಹಲದಿಂದ ಭಾಷಣವನ್ನು ಕೇಳಿದ. ಸ್ವಾಮಿನಾಥರ ಮಾತು, ಉಪದೇಶ, ಸ್ಫೂರ್ತಿದಾಯಕವಾಗಿತ್ತು. ವೇದಿಕೆಯಮೇಲೆ ನಿಂತಿದ್ದ ಸ್ವಾಮಿನಾಥರನ್ನು ಶಾಮನು ದೃಷ್ಟಿಸಿ ನೋಡಿದ. ಯಾವ ಆಡಂಬರವೂ ಇಲ್ಲದ ಒಂದು ಕೈನೂಲಿನ ಪಂಚೆಯಿಂದಲೂ, ಅದೇ ರೀತಿಯ ಒಂದು ತುಂಡು ಬನೀನು ಮತ್ತು ಶಲ್ಯದಿಂದಲೂ ಅಲಂಕಾರಮಾಡಿಕೊಂಡಿದ್ದರು—ಅವರಿಗೆ ವಯಸ್ಸು ನಲವತ್ತು ವರ್ಷಗಳಿದ್ದಿರಬಹುದು. ಭಾಷಣವೆಲ್ಲ ಮುಗಿದಮೇಲೆ ಚಂದಾ ಎತ್ತುವ ಕಾರ್ಯವು ಜರುಗಿತು. ಬಂದಿದ್ದ ಮಹನೀಯರಲ್ಲಿ ಬಹು ಜನ ತಮ್ಮ ಶಕ್ತಿಮೀರಿ ಧನ ಸಹಾಯ ಮಾಡಿದರು. ಸ್ವಾಮಿನಾಥರು ಎಲ್ಲವನ್ನೂ ವಂದನಾಪೂರ್ವಕವಾಗಿ ಸ್ವೀಕರಿಸಿ, ಅಕ್ಕಪಕ್ಕದವರೊಡನೆ ಮಾತಾಡುತ್ತಾ ತಾವಿಳಿದುಕೊಂಡಿದ್ದ ಬಿಡಾರಕ್ಕೆ ಬಂದಾಗ ರಾತ್ರಿ ೯ ಘಂಟೆ ಆಗಿತ್ತು. ಶಾಮನೂ ಜನರ ಹಿಂದೆಯೇ ನಡೆದು ಬಂದ. ಸ್ವಾಮಿನಾಥರನ್ನು ಆಗಲೇ ನೋಡೋಣವೇ ಅಥವಾ ಬೆಳಗ್ಗೆ

ಬರುವುದು ಸೂಕ್ತವೇ ಎಂದು ಚರ್ಚಿಸುತ್ತಾ, ಆ ಮನೆಯ ಮುಂದೆ ಸುತ್ತು ತ್ತಿರುವಾಗಲೇ ಸ್ವಾಮಿನಾಥರು ಹೊರಗೆ ಬಂದರು. ಅವರು ತನ್ನ ಎದುರಿಗೇ ಬರುತ್ತಿರುವುದನ್ನು ಗಮನಿಸಿ ಶಾಮನು ನಮಸ್ಕರಿಸಿದ. ಸ್ವಾಮಿನಾಥರಿಗೆ ಮಾತಾಡಲು ವಿರಾಮವಿಲ್ಲವೆಂದು ತೋರುತ್ತದೆ; ಶಾಮನ ನಮಸ್ಕಾರಕ್ಕೆ ಪ್ರತಿಯಾಗಿ ವಂದಿಸಿ, ಎಲ್ಲಿಗೋ ಹೊರಟುಹೋದರು. ಬಂದ ಸಮಯವು ಸರಿಯಾಗಿಲ್ಲವೆಂದು ತರ್ಕಿಸುತ್ತಾ ಶಾಮನು ಸಾಧ್ಯವಾದರೆ ಸ್ವಾಮಿನಾಥರ ವಿಷಯವನ್ನು ತಿಳಿದುಕೊಳ್ಳೋಣವೆಂದು ಮನೆಯಲ್ಲಿದ್ದ ಜವಾನನನ್ನು ಮಾತಾಡಿಸಲು ಮುಂದುವರೆದ. ಆ ಜವಾನನು ಮದರಾಸಿನವನಾದುದರಿಂದ ಯಾವ ಸುದ್ದಿ ಸಮಾಚಾರಗಳೂ ತಿಳಿದಿರಲಿಲ್ಲ. ಸುಮಾರು ಅರ್ಧ ಘಂಟೆಯ ನಂತರ ಹರಿಜನಬಂಧುಗಳು ಹಿಂದಿರುಗಿದರು. ಅಲ್ಲಿಯೇ ಕಾದಿದ್ದ ಶಾಮನು ಅವರಿಗೆ ಪುನಃ ಕೈಜೋಡಿಸಲು, "ಯಾರು ನೀನು" ಎಂದು ಪ್ರಶ್ನಿಸಿದರು. ಏನು ಉತ್ತರ ಕೊಡಬೇಕೆನ್ನುವುದನ್ನೇ ಆಲೋಚಿಸುತ್ತಾ ಶಾಮನೂ ಅವರ ಹಿಂದೆ ಮನೆಯೊಳಗೆ ನಡೆದ. ಅಲ್ಲಿಯೇ ಇದ್ದ ಕುರ್ಚಿಯೊಂದರಮೇಲೆ ಸ್ವಾಮಿನಾಥರು ಕುಳಿತು, "ಏನು ಬೇಕು" ಎಂದು ಮತ್ತೊಮ್ಮೆ ಕೇಳಲು, "ಯಾವುದಾದರೂ ಕೆಲಸ ಸಿಗುವುದೇನೊ ಎಂದು ಬಂದಿದ್ದೇನೆ" ಎಂಬುದಾಗಿ ತನ್ನ ವಿದ್ಯೆ, ಧ್ಯೇಯ ಎಲ್ಲವನ್ನೂ ವಿಶದಪಡಿಸಿದ. ಹಾಕಿದ್ದ ಕನ್ನಡಕವನ್ನು ನಿಧಾನವಾಗಿ ತೆಗೆದು ಬಟ್ಟೆಯಿಂದ ಒರಸುತ್ತಾ ಸ್ವಾಮಿನಾಥರು "ನಿನಗೆಲ್ಲೋ ಹುಚ್ಚು ಹಿಡಿದಿರುವಹಾಗೆ ಕಾಣುತ್ತೆ" ಎಂದರು.

"ಹಾಗಂದ್ರೆ ಏನು ಸ್ವಾಮಿ, ನನಗರ್ಥವಾಗಲಿಲ್ಲ" ಶಾಮನು ಪುನಃ ಪ್ರಶ್ನಿಸಿದ.

"ಯಾವುದಾದರೂ ಕಚೇರಿಯಲ್ಲಿ ಕೆಲಸ ಹುಡುಕುವುದನ್ನು ಬಿಟ್ಟು ನನ್ನಲ್ಲಿಗೆ ಬಂದರೆ ಏನು ಮಾಡಲು ಸಾಧ್ಯ."

"ಕಚೇರಿಯ ಕೆಲಸ ನನಗಿಷ್ಟವಿಲ್ಲ ಸ್ವಾಮಿ. ನಾನು ಮಾಡುವ ಕೆಲಸ ದಿಂದ ಜನರಿಗೆ ಉಪಕಾರವಾಗಬೇಕು"

"ಹೊಟ್ಟೆ ಏನು ತುಂಬಬೇಕಿಲ್ಲ ತಾನೆ."

"ಅದೂ ಆಗಬೇಕು."

"ಎರಡೂ ಆಗಲು ಸಾಧ್ಯವಿಲ್ಲ—ನಿನಗೆ ಸರಿಯಾದ ದಾರಿ ತೋರಿಸುವವರು ಯಾರೂ ಇಲ್ಲವೆ."

"ಯಾರೂ ತೋರಿಸಬೇಕಿಲ್ಲ ಸ್ವಾಮಿ. ನನ್ನ ಧ್ಯೇಯ ತಿಳಿಸಿದೆ ತಾವು ಸಾಧ್ಯವಾದರೆ ಸಹಾಯ ಮಾಡಬೇಕು."

ಸ್ವಾಮಿನಾಥರು ತಕ್ಷಣ ಉತ್ತರ ಕೊಡಲಿಲ್ಲ—ಸ್ವಲ್ಪ ಹೊತ್ತು ಯೋಚಿಸಿದರು. ಇವನ್ಯಾರೋ ವಿಚಿತ್ರ ಯುವಕನೆಂದು ಅವರಿಗೆ ತೋರಿತು. ಇಲ್ಲದಿದ್ದರೆ ತಮ್ಮಲ್ಲಿಗೆ ಯಾತಕ್ಕೆ ಬರುತ್ತಿದ್ದ ? ಎನ್ನುವುದೇ ಅವರ ಸಂದೇಹ.

"ನಿನಗೆ ಸಂಸಾರ, ತಾಯಿ, ತಂದೆ, ಯಾರೂ ಇಲ್ಲವೆ" ಎಂದು ಸ್ವಾಮಿನಾಥರು ಕೇಳಿದರು.

"ಯಾರೂ ಇಲ್ಲ"

ಈಚೆಗೆ ಸ್ವಾಮಿನಾಥರ ಪ್ರವಾಸದ ಕೆಲಸಕಾರ್ಯಗಳು ತುಂಬಾ ಹೆಚ್ಚಿತ್ತು. ಇದುವರಿವಿಗೂ ತಮ್ಮ ಸಹಾಯಕ್ಕೆಂದು ಅವರು ಯಾರನ್ನೂ ನಂಬಿರಲಿಲ್ಲ ಕಾಗದಗಳಿಗೆ ಉತ್ತರ ಬರೆಯುವುದೂ, ತಮ್ಮ ಕಾರ್ಯಕ್ರಮಗಳನ್ನು ಏರ್ಪಡಿಸಲು ಸಿದ್ಧತೆಗೊಳಿಸುವುದು, ಮುಂತಾದ ಕೆಲಸಗಳಿಗೆ ಯಾತಕ್ಕೆ ಇವನನ್ನು ನೇಮಿಸಿಕೊಳ್ಳಬಾರದೆಂದು ಅವರ ಮನಸ್ಸಿಗೆ ಅನ್ನಿಸಿತು. ಎದುರಿಗೆ ನಿಂತಿದ್ದ ಶಾಮುನನ್ನು ಅಂಗುಷ್ಟದಿಂದ ತಲೆಯವರಿವಿಗೂ ನೋಡಿದರು. ಶಾಮುನು ಅವರ ಬಾಯಿಂದ ಯಾವ ಮಾತು ಹೊರಡುವುದೋ ಎಂದು ಉತ್ಸುಕತೆಯಿಂದ ಕಾಯುತ್ತಿದ್ದ. "ನನ್ನ ಬಳಿ ಸೇರಿಕೊಂಡರೆ ಸೇವಾಕಾರ್ಯ ನಡೆಸಿದಂತೆ ಹೇಗೆ ಆಗುತ್ತೆ" ಎಂಬ ಇನ್ನೊಂದು ಪ್ರಶ್ನೆಗೆ, ಶಾಮುನು ಉತ್ತರ ಹೇಳಬೇಕಾಗಿ ಬಂದಿತು. "ನೀವು ಹರಿಜನರಿಗೆ ತಿಳುವಳಿಕೆ ಕೊಡಲು ಬದ್ಧಕಂಕಣರಾಗಿದ್ದೀರಿ, ಅವರ ಸೇವೆ ಮಾಡುತ್ತಿದ್ದೀರಿ, ನಿಮ್ಮ ಹತ್ತಿರ ಕಲಿತು, ನಾನೂ ಅವರಿಗೆ ನೆರವಾಗಲು ಪ್ರಯತ್ನಿಸುತ್ತೇನೆ" ಎಂದ ಶಾಮು.

"ಆದರೆ ಸಂಬಳ ಎಷ್ಟು ಬೇಕು."

"ನನ್ನ ಸ್ವಂತ ಖರ್ಚಿಗೆ ಮಾತ್ರ ಆದರೆ ಸಾಕು."

"ಎಷ್ಟು"

"ಎಷ್ಟು ಕೊಟ್ಟರೆ ಅಷ್ಟರಲ್ಲಿಯೇ ತೃಪ್ತನಾಗುತ್ತೇನೆ—ಹಣ ನನಗೆ ಮುಖ್ಯವಲ್ಲ—ಆದರೆ, ಜೀವಿತಕ್ಕೆ ಮಾತ್ರ ಅದು ಅಗತ್ಯ."

"ಸರಿ— ಹಾಗಾದರೆ ತಿಂಗಳಿಗೆ ೩೦ ರೂಪಾಯಿ ಕೊಡಲು ಏರ್ಪಡಿಸುತ್ತೇನೆ, ಆಗಬಹುದೊ."

"ಆಗಲಿ. ನಾಳೆಯಿಂದಲೇ ತಮ್ಮಲ್ಲಿಗೆ ಬಂದುಬಿಡುತ್ತೇನೆ" ಎಂದು ಹೇಳಿ ಶಾಮನು ಪುನಃ ನಮಸ್ಕರಿಸಿದ.

"ಅಂದಹಾಗೆ ನಿನ್ನ ಹೆಸರೇನು—ಯಾವ ಜಾತಿ, ಅದನ್ನೇ ಕೇಳಲಿಲ್ಲವಲ್ಲ" ಎಂದು ನಗುತ್ತಾ ಸ್ವಾಮಿನಾಥರು ಪ್ರಶ್ನಿಸಲು, ಅವರಿಗೆ ಸೂಕ್ತ ಉತ್ತರ ಕೊಟ್ಟು ಶಾಮನು ಕಿಟ್ಟುವಿನ ಕೊಟಡಿಗೆ ಹಿಂದಿರುಗಿದ.

ರಾತ್ರಿ ೧೧ ಘಂಟೆಯಾಗಿದ್ದರೂ ಶಾಮನು ಬಾರದೇ ಇದ್ದುದು ಕಿಟ್ಟುವಿನ ಮನಸ್ಸಿಗೆ ಯೋಚನೆಯನ್ನುಂಟುಮಾಡಿತ್ತು. ಮಲಗಿಕೊಳ್ಳಲು ಇಷ್ಟವಿಲ್ಲದೆ ಯಾವುದೋ ಪುಸ್ತಕವನ್ನು ಹಿಡಿದು ನೋಡುತ್ತಿದ್ದಾಗ ಶಾಮನು ಪ್ರವೇಶಿಸಿದ. "ಅವರ ಹಿಂದೇನೇ ಹೊರಟುಬಿಟ್ಟಿಯೇನೋ ಎಂದಿದ್ದೆ." ಕಿಟ್ಟುವು ಹಾಸ್ಯಮಾಡಲು, ನಡೆದ ವಿಷಯವನ್ನೆಲ್ಲ ಶಾಮನು ವಿವರವಾಗಿ ತಿಳಿಸಿದ. ಕಿಟ್ಟುವಿಗೆ ಬಹಳ ಆಶ್ಚರ್ಯವಾಯಿತು. ತಾನು ಹಾಸ್ಯಕ್ಕಾಗಿ ಅಂದಮಾತು ನಿಜವಾಗಬಹುದೆಂದು ಕನಸಿನಲ್ಲಿಯೂ ಅವನು ಎಣಿಸಿರಲಿಲ್ಲ. "ಇದೇನು ಹುಚ್ಚೋ ನಿನಗೆ" ಎಂದು ಕಿಟ್ಟುವು ಟೀಕಿಸುತ್ತಲೇ, "ಈ ಮಾತನ್ನೇ ಸ್ವಾಮಿನಾಥರೂ ಮೊದಲು ಕೇಳಿದರು ಕಿಟ್ಟು" ಶಾಮನು ತಿಳಿಸಿದ. ಶಾಮನು ಈ ಕೆಲಸಕ್ಕೆ ಹೋಗುವುದು ಅವನ ಮಿತ್ರನಿಗೆ ಸ್ವಲ್ಪವೂ ಸಮಾಧಾನವಿರಲಿಲ್ಲ. ಆದರೆ ಶಾಮನು ಮಾತ್ರ ಮೊದಲೇ ತೀರ್ಮಾನಿಸಿ ಅದರಂತೆ ಸ್ವಾಮಿನಾಥರನ್ನು ಭೇಟಿಮಾಡಿದ್ದುದರಿಂದ ಅವನ ಮನಸ್ಸನ್ನು ಬದಲಾಯಿಸಲು ಕಿಟ್ಟುವಿನಿಂದಲೂ ಸಾಧ್ಯವಿರಲಿಲ್ಲ.

ಮಾರನೆಯ ದಿನ ಕಿಟ್ಟುವಿನ ಅನಂತ ಉಪಕಾರಕ್ಕೆ ವಂದನೆಗಳನ್ನು ತಿಳಿಸಿ, ಶಾಮನು ಸ್ವಾಮಿನಾಥರು ಇಳಿದಿದ್ದ ಮನೆಯನ್ನು ಸೇರಿದ. ಸ್ವಾಮಿನಾಥರು ಅದೇತಾನೇ ಉಪಾಹಾರವನ್ನು ಮುಗಿಸಿ ತಮ್ಮ ಮುಂದಿನ ಕಾರ್ಯಕ್ರಮಗಳ ಪಟ್ಟಿಯನ್ನು ಪರಿಶೀಲಿಸುತ್ತಾ ಕುಳಿತಿದ್ದರು. ಶಾಮನು ಕೇವಲ ಒಂದು ಕೈಚೀಲವನ್ನು ಹಿಡಿದುಕೊಂಡು ಪ್ರವೇಶಿಸಿದುದನ್ನು ನೋಡಿ "ಚೀಲದಲ್ಲಿರುವುದೆಲ್ಲಾ ಪರದೇಶಿ ಉಡುಪುಗಳು ತಾನೆ" ಎಂದು ಪ್ರಶ್ನಿಸಿದರು. ಶಾಮನು ಉತ್ತರಕೊಡದೆ ನಿಂತಿರಲು, "ಪವಿತ್ರವಾದ ಖಾದಿಯನ್ನು ಧರಿಸ

ಬೇಕೆನ್ನುವುದು ತಿಳಿಯದೇ? ಇದನ್ನು ಹೇಳಿಕೊಡಬೇಕೇ?" ಎಂದು ಕೇಳಿದ ಪ್ರಶ್ನೆಗಳಿಗೆ, ಶಾಮನು "ಖಾದಿ ಧರಿಸಬೇಕೆನ್ನುವುದು ಚೆನ್ನಾಗಿ ಗೊತ್ತಿದೆ. ಆದರೆ ಹಣದ ಅಭಾವದಿಂದ, ಕಡಿಮೆ ಬೆಲೆಗೆ ಸಿಗುವ ಈ ಉಡುಪನ್ನು ತೆಗೆದುಕೊಳ್ಳಬೇಕಾಯಿತು" ಎಂದು ಉತ್ತರಕೊಟ್ಟ. "ನನ್ನ ಜತೆಯಲ್ಲಿದ್ದ ಮೇಲೆ ಪರದೇಶಿ ಉಡುಪಿಗೆ ಸ್ಥಾನವಿಲ್ಲ. ಕೂಡಲೇ ಬದಲಾಯಿಸಬೇಕು" ಎಂದು ತಮ್ಮ ಹಣದ ಚೀಲದಿಂದ ೧೦ ರೂಪಾಯಿಗಳನ್ನು ತೆಗೆದುಕೊಟ್ಟರು. ಶಾಮನು ಕಾಲವಿಳಂಬಮಾಡದೆ ಖಾದಿಯ ಉಡುಪನ್ನು ಪಡೆದು ಪುನಃ ಸ್ವಾಮಿನಾಥರ ಮನೆಯನ್ನು ಪ್ರವೇಶಿಸಿ, ತನ್ನ ಕೆಲಸವೇನು ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದ. "ನಾವು ಮುಂದೆ ಬೆಂಗಳೂರಿಗೆ ಹೋಗೋಣ. ಇಲ್ಲಿಯ ಕೆಸ ಮುಗಿದಿದೆ. ಆದ್ದರಿಂದ ನಾಳೆ ಸಂಜೆ ರೈಲಿಗೆ ಹೊರಡುತ್ತೇವೆಂದು ಮದರಾಸು ಪತ್ರಿಕೆಗಳಿಗೂ, ನಾಳಿದ್ದು ಪ್ರಾತಃಕಾಲ ಬೆಂಗಳೂರಿಗೆ ಬರುತ್ತೇವೆಂದು ಅಲ್ಲಿನ ದೈನಂದಿನ ಪತ್ರಿಕೆಗಳಿಗೂ ಕಾಗದಗಳನ್ನು ಬರಿ" ಸ್ವಾಮಿನಾಥರು ಅಪ್ಪಣೆಮಾಡಿ ಎಲ್ಲಿಯೋ ಹೋದರು. ಶಾಮನಿಗೆ ದಿಕ್ಕೇ ತೋಚದಂತಾಗಿ ಅವರು ಹೇಳಿದ ಮಾತುಗಳ ಅರ್ಥವೇ ತೋರಲಿಲ್ಲ. ಆದರೂ ಕುತೂಹಲ, ವಿಸ್ಮಯ, ಆಶ್ಚರ್ಯದಿಂದ, ಅಪ್ಪಣೆಯಾದ ಮೇರೆಗೆ ಪತ್ರಗಳನ್ನು ಬರೆದು ಸಿದ್ಧಪಡಿಸಿದ. ಬೆಳಗ್ಗೆ ತಿರುಗಾಡಲು ಹೋಗಿ ಪುನಃ ವಾಪಸ್ಸು ಬಂದ ಹರಿಜನಬಂಧು ಸ್ವಾಮಿನಾಥರು ಸಿದ್ಧವಾಗಿದ್ದ ಪತ್ರಗಳನ್ನು ಓದಿ, ಚೆನ್ನಾಗಿ ಬರೆಯಲ್ಪಟ್ಟಿದೆ ಎಂದು ಮನಸ್ಸಿನಲ್ಲಿಯೇ ಅಂದುಕೊಂಡು, "ಇನ್ನು ಮೇಲೆ 'ಹರಿಜನಬಂಧು ಸ್ವಾಮಿನಾಥರ ಕಾರ್ಯದರ್ಶಿ' ಎಂದು ನೀನೇ ಪತ್ರಗಳಿಗೆ ರುಜುಮಾಡಬಹುದು" ಎಂಬುದಾಗಿ ತಿಳಿಸಿದರು. ಶಾಮನು ಅದರಂತೆ ತನ್ನ ರುಜುವನ್ನು ಹಾಕಿ ಪತ್ರಗಳನ್ನು ಟಪಾಲಿಗೆ ತಲುಪಿಸಿದ. ಸುಮಾರು ೧೧ ಘಂಟೆಯಾಗಿದ್ದುದರಿಂದ "ನೀನೂ ಊಟವನ್ನು ಇಲ್ಲಿಯೇ ಮಾಡು. ಖರ್ಚಿನ ವಿಷಯ ನೋಡಿಕೊಳ್ಳೋಣ" ಎಂದು ಸ್ವಾಮಿನಾಥರು ತಿಳಿಸಿದರು. ಆಗಬಹುದೆಂದು ಒಪ್ಪಿ, ಆಗತಾನೆ ಬಂದ ಟಪಾಲನ್ನು ನೋಡುತ್ತಾ ಶಾಮನು ಕುಳಿತಿರುವಷ್ಟರಲ್ಲಿಯೇ ಸ್ವಾಮಿನಾಥರು ಒಳಕ್ಕೆ ಹೋಗಿ ತಮ್ಮ ಊಟವನ್ನು ಮುಗಿಸಿಕೊಂಡು ಬಂದರು. ಶಾಮನೂ ನಂತರ ಅಡಿಗೆ ಮನೆಯನ್ನು ಪ್ರವೇಶಿಸಿ, ಅಡಿಗೆಯವನಿಂದ ಸಿದ್ಧಪಡಿಸಲ್ಪಟ್ಟ ಊಟವನ್ನು ನಿಧಾನವಾಗಿ

ಮಾಡಿದ. ಸ್ವಾಮಿನಾಥರ ರುಚಿಯನ್ನೂ, ಅವರಿಗೆ ನಾನಾವಿಧವಾದ ಪಾಕ ಗಳ ಮೇಲಿರುವ ಪ್ರೀತಿಯನ್ನೂ ಕಂಡು ಅವನಿಗೆ ಆಶ್ಚರ್ಯವಾಯಿತು. ತನ್ನ ಜೀವಿತದಲ್ಲೇ ಅಷ್ಟು ಪುಷ್ಕಳವಾದ ಊಟವನ್ನು ಮಾಡಿರಲಿಲ್ಲ. ಅವನಿಗೆ ಹೆಸರೇ ತಿಳಿಯದ ಅನೇಕ ಪಲ್ಯಗಳೂ ಭಕ್ಷ್ಯಗಳೂ ಮಾಡಲ್ಪಟ್ಟಿತ್ತು—ಇದರ ಜತೆಗೆ ಹಾಲು ಹಣ್ಣುಗಳು ಬೇರೆ.

ಸಂಜೆ ಪುನಃ ಸ್ವಾಮಿನಾಥರಿಂದ ಮತ್ತೊಂದು ಉಪನ್ಯಾಸ ಕೊಡಲ್ಪಟ್ಟು ಎಂದಿನಂತೆ ಚಂದಾ ಹಣವೂ ವಸೂಲಾಯಿತು. ಶಾಮನೇ ಆ ಹಣವನ್ನೆಲ್ಲಾ ಸ್ವೀಕರಿಸಿದ. ಸ್ವಾಮಿನಾಥರು ಬಿಡಾರಕ್ಕೆ ಹಿಂದಿರುಗಿದನಂತರ "ಶಾಮು, ಎಷ್ಟು ವಸೂಲಾಯಿತು" ಎಂದು ಪ್ರಶ್ನಿಸಿದರು. "೩೦೦ ರೂಪಾಯಿ" ಎಂದು ಹಣ ವನ್ನು ಅವರ ವಶಕ್ಕೆ ಒಪ್ಪಿಸಿ, "ಈ ಹಣವೆಲ್ಲಾ ಯಾವುದಕ್ಕೆ ವಿನಿಯೋಗ ವಾಗುತ್ತೆ" ಎಂದು ಶಾಮನು ಕುತೂಹಲದಿಂದ ಪ್ರಶ್ನಿಸಿದ. ತಲೆ ಎತ್ತಿ ಶಾಮನ ಮುಖವನ್ನೇ ದೃಷ್ಟಿಸಿ "ಹರಿಜನರ ಅಭಿವೃದ್ಧಿ ಕಾರ್ಯಗಳಿಗೆ, ಇನ್ಯಾತಕ್ಕೆ" ಎಂದರು. ರೈಲಿಗೆ ಕೇವಲ ಸ್ವಲ್ಪ ಕಾಲವೇ ಉಳಿದಿದ್ದುದರಿಂದ ಪ್ರಯಾಣಕ್ಕೆ ಶಾಮನು ಸಿದ್ಧಪಡಿಸಲುಪಕ್ರಮಿಸಿದ. ನಿಲ್ದಾಣಕ್ಕೆ ಅನೇಕ ಜನ ದೊಡ್ಡಮನುಷ್ಯರೂ ಹೆಂಗಸರೂ ಬಂದು ಸ್ವಾಮಿನಾಥರನ್ನು ಬೀಳ್ಕೊಟ್ಟರು. ಸ್ವಾಮಿನಾಥರು ಮದರಾಸಿನ ಜನರ ಆದರ ಆತಿಥ್ಯಗಳಿಗೆ ಅನೇಕ ಬಾರಿ ವಂದಿಸಿ, ಎರಡು ಕೈಗಳನ್ನೂ ಜೋಡಿಸಿದರು.

೩

ಬೆಂಗಳೂರಿನಲ್ಲಿ ವಾಸಮಾಡುವುದೆಲ್ಲಿ ಎನ್ನುವುದೇ ಶಾಮನಿಗೆ ತೋಚ ದಂತಾಯಿತು. ಅದನ್ನು ಸ್ವಾಮಿನಾಥರೇ ಪರಿಹಾರಮಾಡಿದರು. ನಿಲ್ದಾಣಕ್ಕೆ ಬಂದಿದ್ದ ತಮ್ಮ ದೊಡ್ಡ ಮೋಟಾರಿನಲ್ಲೇ ಶಾಮನನ್ನು ಕೂರಿಸಿಕೊಂಡು, "ಕೆಲಸ ವಿಪರೀತವಾಗಿರುವುದರಿಂದ ನೀನು ಬೇರೆ ಎಲ್ಲಿಯೂ ಇರಲು ಆಗು ವುದಿಲ್ಲ. ನಮ್ಮ ಮನೆಯಲ್ಲೇ ಒಂದು ಕೋಣೆಯನ್ನು ಆಫೀಸನ್ನಾಗಿ ಮಾಡಿ ಕೊಂಡಿದ್ದೇನೆ, ಅಲ್ಲಿಯೇ ಇರಬಹುದು" ಎಂದರು. ಸ್ವಾಮಿನಾಥರ ಬಂಗಲೆ ಚೆನ್ನಾಗಿಯೇ ಇತ್ತು. ಅದನ್ನು ನೋಡಿದೊಡನೆ ಶಾಮನ ಮನಸ್ಸಿಗೆ ಸಂತೋಷದ ಬದಲು ಅತೃಪ್ತಿಯಾಯಿತು. ಬಾಗಿಲಿನ ಬಳಿ ಹೋಗುವ

ಹೊತ್ತಿಗೆ ಸರಿಯಾಗಿ ಸ್ವಾಮಿನಾಥರ ಹೆಣ್ಣುಮಕ್ಕಳಿಬ್ಬರು ಮೋಟಾರಿನ ಹತ್ತಿರಕ್ಕೆ ಓಡಿಬಂದು, ನಗುತ್ತಾ ತಂದೆಯನ್ನು ಮಾತಾಡಿಸಿ, ಪಕ್ಕದಲ್ಲಿ ಸುಮ್ಮನೇ ನಿಂತಿದ್ದ ಶಾಮನನ್ನು ನೋಡಿ "ಅಣ್ಣಾ, ಇವರ್ಯಾರು" ಎಂದು ಪ್ರಶ್ನಿಸಿದರು. ಸ್ವಾಮಿನಾಥರು "ಇವರು ನನ್ನ ಹೊಸ ಕಾರ್ಯದರ್ಶಿ" ಎಂದು ತಿಳಿಸಿ, ಎಲ್ಲರೂ ಒಳಗೆ ಹೋಗುವಾಗ ಮೋಟಾರಿನ ಡ್ರೈವರನ್ನು ಕರೆದು "ಇವರಿಗೆ ಆಫೀಸು ರೂಮು ತೋರಿಸು" ಎಂಬುದಾಗಿ ಅಪ್ಪಣೆ ಮಾಡಿದರು. ಮನೆಯಿಂದ ಹೊರಗೆ ಓಡಿಬಂದ ಹುಡುಗಿಯರನ್ನು ನೋಡಿ ಶಾಮನಿಗೆ ಕಮಲಳ ಜ್ಞಾಪಕವು ತಟ್ಟನೆ ಬಂದು—ಆದರೆ ಕಮಲಳೆಲ್ಲಿ—ಈ ಆಧುನಿಕ ಭಾವನೆಗಳಿಂದ ಮೆರೆಯಬೇಕೆಂಬ ಪ್ರದರ್ಶನದ ಬೊಂಬೆಗಳಂತಹ ಹುಡುಗಿಯರೆಲ್ಲಿ—ಎನ್ನಿಸಿತು. ಸ್ವಾಮಿನಾಥರ ಮಕ್ಕಳಿಗೆ ಸುಮಾರು ೧೫ ಮತ್ತು ೧೮ ವಯಸ್ಸಿದ್ದಿರಬಹುದು. ತೆಳುವಾದ ಸಿಲ್ಕು ಸೀರೆಗಳನ್ನುಟ್ಟು, ಮೈಯೆಲ್ಲಾ ಕಾಣುವಂತಹ ತೋಳಿಲ್ಲದ ಕುಪ್ಪಸಗಳನ್ನು ತೊಟ್ಟಿದ್ದರು. ಕೈಯಲ್ಲಿ ಪುಟ್ಟ ಗಡಿಯಾರಗಳ ಜತೆಗೆ ಒಂದೊಂದು ಭಂಗಾರದ ಬಳೆ, ಮುಖಗಳಿಗೆ ಪೌಡರ್ ಮತ್ತು ಸ್ನೋ. ಒಬ್ಬೊಬ್ಬರು ಎರಡೆರಡು ಜಡೆಗಳನ್ನು ಹೆಣೆದುಕೊಂಡು ಎದೆಯಮೇಲೆ ಬಿಟ್ಟಿದ್ದರು. ಇವರ ಷೋಕೇನು, ಪರದೇಶಿ ಉಡುಪುಗಳೇನು, ಅವರ ಖಾದಿಯೇನು, ಧ್ಯೇಯವೆಂತಹದು ಎಂಬ ಅನುಮಾನಗಳು ಶಾಮನ ಮನಸ್ಸಿಗೆ ಬರುತ್ತಿದ್ದಂತೆಯೇ, "ಇದೇ ಆಫೀಸು ರೂಮು" ಎಂದು ಡ್ರೈವರು ತಿಳಿಸಿದ. ಏನು ಮಾಡಬೇಕೆಂಬುದನ್ನು ಅರಿಯದೆ ಶಾಮನು ಕೈಚೀಲವನ್ನು ಮೂಲೆಯಲ್ಲಿರಿಸಿ, ಅಲ್ಲಿಯೇ ಇದ್ದ ಕುರ್ಚಿಯೊಂದರ ಮೇಲೆ ಕುಳಿತ. ಸ್ವಲ್ಪ ಹೊತ್ತಿನಮೇಲೆ ಅಡಿಗೆಯವನು ಕಾಫಿಯನ್ನು ತಂದಿಟ್ಟು, ಸ್ನಾನ ಮಾಡಬಹುದೆಂದು ತಿಳಿಸಲು, ಚೀಲದಿಂದ ಟವಲನ್ನು ತೆಗೆದುಕೊಂಡು ಅಡಿಗೆಯವನ ಹಿಂದೆ ಮರುಮಾತಾಡದೆ ಹೆಜ್ಜೆ ಹಾಕಿದ. ಶಾಮನು ಸ್ನಾನ ಮುಗಿಸಿ, ಹಿಂದಿರುಗುವ ವೇಳೆಗೆ, ಸ್ವಾಮಿನಾಥರು ಆಫೀಸು ರೂಮಿನಲ್ಲಿ ಪೇಪರುಗಳನ್ನು ನೋಡುತ್ತಿದ್ದರು. ಒಳಗೆ ಬಂದ ಕಾರ್ಯದರ್ಶಿಯನ್ನು ಉದ್ದೇಶಿಸಿ "ನಮ್ಮ ಕಾರ್ಯಕ್ರಮ ಎಲ್ಲಾ ಪತ್ರಿಕೆಗಳಲ್ಲೂ ವಿಶದವಾಗಿ ಬಂದಿದೆ. ತುಂಬಾ ಸಂತೋಷ—ನೀನು ಇಲ್ಲಿರುವ ಕಾಗದಗಳನ್ನೆಲ್ಲಾ ಓದಿ ಸರಿಯಾದ ರೀತಿಯಲ್ಲಿ ವಿಂಗಡಿಸಿಡು" ಎಂದು ಕೆಲಸವನ್ನು ಹೇಳಿ

ಹೊರಗೆ ತಾರಾಡಲು ಹೊರಟರು. ಅಲ್ಲಿದ್ದ ಕಾಗದಪತ್ರಗಳನ್ನೆಲ್ಲಾ ಶಾಮನು ನಿಧಾನವಾಗಿ ಓದಿದ. ಎಲ್ಲವೂ ಸ್ವಾಮಿನಾಥರ ಪ್ರಯಾಣ, ಉಪನ್ಯಾಸ, ಹರಿಜನರಿಗೆ ಅವರು ಮಾಡುತ್ತಿರುವ ಸೇವೆ, ಮುಂತಾದ ವಿಷಯಗಳಿಗೆ ಸೇರಿತ್ತು. ಮಧ್ಯಾಹ್ನ ೧೨ ಘಂಟೆಗೆ ಸ್ವಾಮಿನಾಥರು ಮನೆಗೆ ಬಂದಮೇಲೆ ಊಟಕ್ಕೆ ಸಿದ್ಧತೆಯಾಯಿತು. ಶಾಮನನ್ನು ಮಾತ್ರ ಬೇರೆ ಕೂರಿಸಿ ಮಿಕ್ಕವರೆಲ್ಲಾ ಊಟದ ಮನೆಯಲ್ಲಿ ಕುಳಿತರು. ಈ ಭೇದಭಾವವು ಶಾಮನಿಗೆ ಸರಿದೋರದಿದ್ದರೂ ಯತ್ನವಿಲ್ಲದೆ ಒಬ್ಬನೇ ಊಟಮಾಡಬೇಕಾಯಿತು. ಮದರಾಸಿನಲ್ಲಿ ತಯಾರಾಗಿದ್ದಂತೆ ಇಲ್ಲಿಯೂ ರುಚಿರುಚಿಯಾದ ಅಡುಗೆ ಪದಾರ್ಥಗಳು ಮಾಡಲ್ಪಟ್ಟಿದ್ದವು. ಊಟಮಾಡಿ ಆಫೀಸು ಕೋಣೆಯಲ್ಲಿ ವಿಶ್ರಾಂತಿ ಪಡೆಯಲು ಕುಳಿತಾಗ, ಸ್ವಾಮಿನಾಥರು ಇಷ್ಟು ಸುಖವಾಗಿರಲು ಹಣವೆಲ್ಲಿಂದ ಬರುತ್ತದೆ? ಅವರಿಗೆ ಪಿತ್ರಾರ್ಜಿತ ಆಸ್ತಿಯೇನಾದರೂ ಇದೆಯೇ? ಎಂಬ ಸಂದೇಹ ಶಾಮನನ್ನು ಆವರಿಸಿತು. ಎರಡು ಮೂರು ದಿನ ಯಾವ ಕೆಲಸವೂ ಇಲ್ಲದೆ ಸುಮ್ಮನೆ ತಾರಾಡಿಕೊಂಡಿದ್ದಮೇಲೆ, ಸ್ವಾಮಿನಾಥರು ಪುನಃ ಪ್ರವಾಸವನ್ನು ನಿಷ್ಕರ್ಷಿಸಿದರು. ಶಾಮನೂ ಅವರ ಜೊತೆಯಲ್ಲಿ ಒಂದು ವಾರದವರೆಗೂ ಸುತ್ತಿ, ವಸೂಲಾದ ಚಂದಾ ಮೊಬಲಗನ್ನೆಲ್ಲಾ ಸೇರಿಸಿ, ಊರಿಗೆ ಬಂದನಂತರ ಅವರ ವಶಕ್ಕೆ ಒಪ್ಪಿಸಿದ. ಹಣವೆಲ್ಲಿ ಹೋಗುತ್ತದೆ, ಯಾವ ಉದ್ದಿಶ್ಯಕ್ಕೆ ಖರ್ಚಾಗುತ್ತದೆ, ಎಂಬುದೇ ಅವನಿಗೆ ಅರ್ಥವಾಗಿರಲಿಲ್ಲ. ಅಷ್ಟು ಹೊತ್ತಿಗೆ ಆ ಮನೆಗೆ ಬಂದು ಕೆಲವು ದಿನಗಳಾಗಿದ್ದುದರಿಂದ ಮನೆಯವರೆಲ್ಲಾ ಶಾಮನೊಡನೆ ಮಾತಾಡುವಷ್ಟು ಪರಿಚಿತರಾಗಿದ್ದರು.

ಬೆಂಗಳೂರಿಗೆ ಬಂದು ೧೫ ದಿನಗಳನಂತರ ಶಾಮನಿಗೆ ಒಂದೊಂದಾಗಿ ಸ್ವಾಮಿನಾಥರ ಮನೆಕೆಲಸಗಳು ಬರಲಾರಂಭಿಸಿದವು. ೨೦ ದಿನಗಳು ಮುಗಿಯುವಷ್ಟರಲ್ಲಿ ಮನೆಗೆ ಸಾಮಾನು ಸರಬರಾಜಿನಿಂದ ಯೋಗಕ್ಷೇಮದವರೆಗೂ ಶಾಮನೇ ನೋಡಬೇಕಾದ ಸ್ಥಿತಿ ಬಂದಿತು. ಒಂದು ದಿನ ಸ್ವಾಮಿನಾಥರು ಶಾಮನನ್ನು ಕರೆದು "ಸಂಜೆ ಮಿನಾ, ನಳಿನೀ ಸಿನಿಮಾಗೆ ಹೋಗಬೇಕೂಂತಾಳೆ—ಗ್ಲೋಬ್ ಗೆ ಕರೆದುಕೊಂಡುಹೋಗಬಾ—ಅವರು ಒಳ್ಳೇ ಇಂಗ್ಲೀಷು ಚಿತ್ರ ನೋಡಬೇಕಂತೆ" ಎಂದು ಅಪ್ಪಣೆ ಮಾಡಿದರು. ಶಾಮನು ದುಡುಕುವ ಮನುಷ್ಯನಾಗಿರಲಿಲ್ಲ. ಸಂಬಳ ಕೊಡುವವರು ಹೇಳಿದಂತೆ

ಮಾಡುವುದೇ ಧರ್ಮವೆಂದು ತಿಳಿದು, ಹುಡುಗಿಯರನ್ನು ಸಿನಿಮಾಗೆ ಕರೆದು ಕೊಂಡುಹೋದ. ಅವನಿಗೆ ಹುಡುಗಿಯರೊಡನೆ ಮಾತಾಡುವುದಕ್ಕೂ ಇಷ್ಟ ವಿಲ್ಲದಿದ್ದರೂ ವಿಮಾನಾ, ನಳಿನಿ ಮಾತ್ರ ಮೇಲಿಂದಮೇಲೆ ಅವನ ವಿಷಯ ತಿಳಿದುಕೊಳ್ಳಲು ಪ್ರಶ್ನಿಸಿದರು. ಮನೆಗೆ ಹಿಂದಿರುಗಿದರೂ ಹುಡುಗಿಯ ರಿಬ್ಬರೂ ಸ್ವಾಮಿನಾಥರೊಡನೆ "ಅಣ್ಣಾ, ನಿನ್ನ ಕಾರ್ಯದರ್ಶಿಗೆ ಮಾತೂ ಬರೋದಿಲ್ಲ—ಎಲ್ಲೋ ಹಳ್ಳಿಯಿಂದ ಬಂದಿರಬೇಕು" ಎಂದು ಹೇಳಿ ನಗುತ್ತಾ ಒಳಗೆ ಹೋದರು. ಶಾಮನು ತನ್ನ ಭುಜದಿಂದ ಯಾವುದೋ ಭಾರವನ್ನು ಕೆಳಗಿಸಿದವನಂತೆ ನಿಟ್ಟುಸಿರುಬಿಟ್ಟು ತನ್ನ ಕೋಣೆಗೆ ಹೋಗಿ, ಮುಂದಿನ ಕೆಲಸ ನೋಡಲಾರಂಭಿಸಿದ.

ಎರಡು ಮೂರು ದಿನಗಳನಂತರ ಸ್ವಾಮಿನಾಥರು ಶಾಮನನ್ನು ಕೂರಿಸಿ ಕೊಂಡು ಲೆಕ್ಕಗಳನ್ನು ಬರೆಯುವಂತೆ ಒಂದೊಂದಾಗಿ ಹೇಳಿದರು. "ಮದರಾ ಸಿನಲ್ಲಿ ಚಂದಾ ವಸೂಲಿ ಮೊದಲನೆಯ ದಿನ ೧೦೦ ರೂಪಾಯಿ, ಎರಡನೆಯ ದಿನ ೫೫ ರೂಪಾಯಿ, ಖರ್ಚು ೧೨೦ ರೂಪಾಯಿ" ಎಂದು ಸ್ವಾಮಿನಾಥರು ಹೇಳಿದೊಡನೆ ಶಾಮನು ಅವರ ಮುಖವನ್ನು ನೋಡಿದ. ಆದರೆ ಅವರು ತಮ್ಮ ಚಿಕ್ಕ ಪುಸ್ತಕವನ್ನು ನೋಡುತ್ತಿದ್ದರು. ಒರೆದಮೇಲೆ "ಈ ಹಣ ವೆಲ್ಲಾ ಎಲ್ಲಿಗೆ ಹೋಗುತ್ತೆ. ಪುನಃ ಧೈರ್ಯದಿಂದ ಶಾವು ಪ್ರಶ್ನಿಸಿದ. ಸ್ವಾಮಿ ನಾಥರು ನಗುತ್ತಾ "ಮಗೂ, ಇಲ್ಲಿ ನೋಡು, ನಾವು ಹೀಗೆ ವಸೂಲ್ಮಾಡೋ ಚಂದಾ ಹಣವೆಲ್ಲಾ ನಮ್ಮ ಮೇಲಿನವರಿಗೆ ಅಂದರೆ ಮೂಲ ಸಂಘಕ್ಕೆ ಕಳುಹಿಸ ಬೇಕು. ಅವರು ಹರಿಜನರಿಗೆ ಉಪಯುಕ್ತವಾದ ಕಾರ್ಯಗಳಿಗೆ ಖರ್ಚು ಮಾಡುತ್ತಾರೆ. ಅಥವಾ ನಾನೇ ಸ್ವಲ್ಪ ಭಾಗವನ್ನು ಹರಿಜನರ ಮೇಲ್ಮೆಗಾಗಿ ಖರ್ಚುಮಾಡಿ ವಿವರ ತಿಳಿಸಿದರೂ ಸರಿ, ಹಾಗೂ ನಮ್ಮ ಪ್ರವಾಸದ, ಊಟ ಉಪಚಾರದ ವೆಚ್ಚವನ್ನೂ ತೋರಿಸಬಹುದು" ಎಂದರು. "ಎಲ್ಲಿ ಚಂದಾ ವಸೂಲಿಯಾಗುತ್ತೋ, ಆ ಊರಿನಲ್ಲೇ ಹರಿಜನರ ಉಪಯೋಗಕ್ಕೆ ಆ ಹಣ ಖರ್ಚುಮಾಡುವುದು ಸೂಕ್ತವಲ್ಲವೇ, ಧರ್ಮವಲ್ಲವೇ" ಶಾಮನು ಪ್ರಶ್ನಿಸಿದ. ಸ್ವಾಮಿನಾಥರಿಗೆ ಅಸಮಾಧಾನವಾಯಿತು. "ನಿನ್ನಷ್ಟು ಬುದ್ಧಿ ಯಾರಿಗೂ ಇಲ್ಲವೆಂದು ತಿಳಿದುಕೊಳ್ಳಬೇಡ. ಎಲ್ಲಿ ಅವಶ್ಯಕವೋ ಅಲ್ಲಿ ಖರ್ಚುಮಾಡ ಬೇಕು (ವ್ಯಂಗ್ಯವಾಗಿ ಶಾಮನಿಗೆ ಉತ್ತರಕೊಟ್ಟು ಲೆಕ್ಕಗಳನ್ನು ಬರೆಸಿ

ಮುಗಿಸಿದರು. ಅವರು ಎದ್ದು ಹೋದಮೇಲೆ ಶಾಮುನಿಗೆ ಆಶ್ಚರ್ಯವೂ, ಹಾಗೆಯೇ ತಡೆಯಲಾರದ ಸಂಕಟವೂ ಆಯಿತು. ಸ್ವಾಮಿನಾಥರು ಇಷ್ಟು ಸುಖವಾಗಿರಲು ಕಾರಣ ಅವನಿಗೆ ಕೂಡಲೇ ತಿಳಿಯಿತು. ಹೀಗೆ ಚಂದಾ ಎತ್ತುವುದೂ, ಹಣ ಅಲ್ಲಿ ಇಲ್ಲಿ ವಿನಿಯೋಗಿಸುತ್ತೇವೆಂದು ತಿಳಿಸಿ, ತಮ್ಮ ಜೀವನಕ್ಕೆ ಉಪಯೋಗಿಸುವುದೂ ಸರಿಯೆ ಎಂದು ಯೋಚಿಸಿದ. ಬುದ್ಧಿಯೇ ಕೆಟ್ಟಂತಾಯ್ತು. "ಆದರೆ, ಈ ರೀತಿ ಎಷ್ಟು ದಿನ ಸಮಾಜ ದ್ರೋಹ ನಡೆಯ ಬಹುದು. ಎಂದಾದರೂ ಒಂದು ದಿನ ಹೊರಗೆ ಬೀಳುವುದಿಲ್ಲವೇ" ಎಂದು ಶಾಮುನು ತನ್ನ ಮನಸ್ಸಿಗೆ ಪ್ರಶ್ನೆ ಹಾಕುತ್ತಿರುವಾಗಲೇ "ಹೇಗೆ ಹೊರಗೆ ಬೀಳುತ್ತೆ—ದೊಡ್ಡ ವ್ಯಕ್ತಿಗಳೂ, ಉದಾರಿಗಳೂ, ತ್ಯಾಗವೀರರೂ ಆದ ಮಹನೀಯರ ಮಾತೇ ಸತ್ಯವೆಂದು ಜನ ನಂಬುವುದಿಲ್ಲವೇ—ಅವರ ಲೆಖ್ಖಪತ್ರ ಗಳನ್ನು ನೋಡುವ ಧೈರ್ಯ ಸಹ ಯಾರಿಗಿದೆ" ಎಂದು ಅವನ ಮನಸ್ಸು ಉತ್ತರಕೊಟ್ಟಿತು.

ಮಾರನೆಯ ದಿನ ಶಾಮುನಿಗೆ ಉತ್ಸಾಹವೇ ಇರಲಿಲ್ಲ. ಅದೂ ಅಲ್ಲದೆ ಮನೆಯ ಚಿಕ್ಕ ಪುಟ್ಟ ಮಕ್ಕಳಿಗೆ ಪಾಠ ಹೇಳಿಕೊಡುವುದು, ದೊಡ್ಡ ಹುಡುಗ ರಿಗೆ ಬೇಕಾದುವನ್ನೆಲ್ಲಾ ಒದಗಿಸುವುದು, ಮುಂತಾದ ಕೆಲಸಗಳು ಅವನಿಗೆ ತುಂಬಾ ಬೇಸರವನ್ನುಂಟುಮಾಡಿದ್ದವು. ತನ್ನ ಕೆಲಸದಿಂದ ಹರಿಜನರಿಗೆ ಉಪಕಾರವಾಗುವ ಬದಲು, ಅಪಕಾರದಲ್ಲಿ ತಾನೂ ಭಾಗ ವಹಿಸಿದಂತೆ ಖಂಡಿತ ವಾಗಿ ಆಗುತ್ತದೆಂದು ತಿಳಿದು, ಆ ತಿಂಗಳಿನ ಸಂಬಳ ಬಂದನಂತರ ಸ್ವಾಮಿನಾಥ ರನ್ನು ಕಂಡು ಕೈಮುಗಿದು ಹೊರಡುವೆನೆಂದು ತಿಳಿಸಿದ ಅವರಿಗೂ ಆಶ್ಚರ್ಯ ವಾಯಿತು. ಮನೆಗೆಲ್ಲಾ ಉಪಕಾರಮಾಡುತ್ತಿದ್ದ ಶಾಮುನು ಹೋಗುವುದು ಅವರಿಗೆ ಸಮ್ಮತವಾಗಲಿಲ್ಲ. "ಯಾತಕ್ಕೆ ಹೋಗುತ್ತೀಯಾ, ಮುಂದಿನ ತಿಂಗಳಿನಿಂದ ಇನ್ನೂ ೫ ರೂಪಾಯಿ ಹೆಚ್ಚು ಸಂಬಳ ಕೊಡಿಸುತ್ತೇನೆ" ಎಂದು ಅವರು ಸೂಚಿಸುತ್ತಲೂ, ಶಾಮುನು ಆ ಮಾತುಗಳ ಕಡೆ ಗಮನಕೊಡದೆ, "ಸ್ವಾಮಿ, ನಿಮ್ಮ ಪುಸ್ತಕಗಳು, ಲೆಕ್ಕಪತ್ರಗಳು ಇವೆಲ್ಲಾ ಇಲ್ಲಿವೆ, ನೋಡಿಕೊಳ್ಳಿ" ಎಂದು ತನ್ನ ಸ್ವಾಧೀನದಲ್ಲಿದ್ದ ಸಂಘದ ಹಣವನ್ನೆಲ್ಲಾ ಒಪ್ಪಿಸಿ ಯಾರೊಡನೆಯೂ ಮಾತಾಡದೆ ಮನೆಯನ್ನು ಬಿಟ್ಟು, ಮುಂದೇನು ಮಾಡಬೇಕೆಂದು ಯೋಚಿಸುತ್ತಾ ಚಿಕ್ಕಪೇಟೆಯಲ್ಲಿ ಬರುತ್ತಿರುವಾಗಲೇ

ಎದುರಿಗೆ ಶ್ರೀ ಶರಣಪ್ಪನವರು ಬಂದು "ಏನಯ್ಯಾ, ಎಲ್ಲಿಗೆ ಹೋಗುತ್ತೀ.
ಸ್ವಾಮಿನಾಥರು ಮನೆಯಲ್ಲಿದ್ದಾರಾ" ಎಂದರು.

೪

ಶರಣಪ್ಪನವರನ್ನು ಶಾಮನು ಒಂದೆರಡು ಬಾರಿ ನೋಡಿದ್ದ. ಆದರೆ ಹಿಂದೆಂದೂ ಮಾತಾಡಿರಲಿಲ್ಲ. ಅವರು ಸ್ವಾಮಿನಾಥರ ಮನೆಗೆ ಬಂದಿದ್ದಾಗ ಮಾತ್ರ ಶಾಮನು ಮುಖಪರಿಚಿತಿ ಮಾಡಿಕೊಂಡಿದ್ದ. ಶರಣಪ್ಪನವರು ಹೆಸರಾಂತ ಸ್ವದೇಶಿ ಪ್ರೇಮಿಗಳು. ಅವರ ಭಾಷಣಗಳೂ, ತತ್ವಗಳೂ ಬೆಂಗಳೂರಿನಲ್ಲೆಲ್ಲಾ ಪ್ರಚಂಡ ಕ್ರಾಂತಿಯನ್ನೆಬ್ಬಿಸಿತ್ತು. ರಾಜಕೀಯ ಚಳುವಳಿಯಲ್ಲಿ ಭಾಗ ವಹಿಸಿ ಎರಡು ಬಾರಿ ಕಾರಾಗೃಹವಾಸವನ್ನೂ ಮಾಡಿದ್ದರಂತೆ. ಅಂತೂ ಶರಣಪ್ಪನವರ ಹೆಸರೂ, ಚಟುವಟಿಕೆಗಳೂ ಎಲ್ಲರಿಗೂ ಚೆನ್ನಾಗಿ ತಿಳಿದಿತ್ತು. ಇಷ್ಟೇ ಅಲ್ಲದೆ ಅವರು ತಮ್ಮ ಪಕ್ಷದಿಂದ ಪೌರಸಭೆ, ಜಿಲ್ಲಾ ಸಂಘ, ಮುಂತಾದ ಅನೇಕ ಸಂಸ್ಥೆಗಳಿಗೆ ಸದಸ್ಯರೂ ಆಗಿದ್ದರು. ಅಂದು ಅನಿರೀಕ್ಷಿತವಾಗಿ ಬೀದಿಯಲ್ಲಿ ಹೋಗುತ್ತಿದ್ದ ಶಾಮನನ್ನು ವಿಶ್ವಾಸದಿಂದ ಮಾತಾಡಿಸಿದ್ದು ಅವನಿಗೆ ಸಂತೋಷವೇ ಆಯಿತು. "ಮನೆಯಲ್ಲಿದ್ದರು" ಎಂದು ಅವರ ಪ್ರಶ್ನೆಗೆ ಉತ್ತರಕೊಟ್ಟು ಮುಂದೆ ಹೆಜ್ಜೆ ಹಾಕಲು ಪ್ರಯತ್ನಿಸಿದ. ಆದರೆ ಶರಣಪ್ಪನವರು ಪುನಃ "ನೀನು ಎಲ್ಲಿಗೆ ಹೋಗುತ್ತೀಯಪ್ಪಾ" ಎಂದರು. "ಎಲ್ಲಿಗೂ ಇಲ್ಲ. ನಾನು ಸ್ವಾಮಿನಾಥರ ಬಳಿ ಕೆಲಸ ಬಿಟ್ಟು ಬೇರೆ ಕಡೆ ಹುಡುಕಲು ಯೋಚಿಸುತ್ತಾ ಹೊರಟಿದ್ದೇನೆ" ಎಂಬುದಾಗಿ ಹೇಳಿದ ಮಾತನ್ನು ಕೇಳಿ, ಆಶ್ಚರ್ಯದಿಂದ ಅವರು "ನೀನು ಯಾವ ಊರಿನವನು" ಎಂದು ಪ್ರಶ್ನಿಸಿದರು. ಉತ್ತರ ಕೊಡದೆ ಮುಂದೆ ಹೋಗುವುದು ಸಭ್ಯರ ಲಕ್ಷಣವಲ್ಲವೆಂದು ಭಾವಿಸಿ, "ಮದರಾಸಿಗೆ ಸೇರಿದವನು" ಎಂದು ತಿಳಿಸಿದ. ಅವರಿಗೆ ಏನು ತೋಚಿತೋ ಸ್ವಲ್ಪ ಹೊತ್ತು ಆಲೋಚಿಸಿ "ಮಧ್ಯಾಹ್ನ ನಮ್ಮ ಮನೆಗೆ ಸ್ವಲ್ಪ ಬರುತ್ತೀಯಾ" ಎಂದರು. ಯಾತಕ್ಕಾಗಿ ಕರೆಯುತ್ತಾರೆ ಎನ್ನುವುದು ಅವನಿಗೆ ಅರ್ಥವಾಗಲಿಲ್ಲ. ಆದರೂ ಉನ್ನತ ವ್ಯಕ್ತಿಗಳೊಬ್ಬರು ತಾವಾಗಿ ಕರೆಯುವಾಗ ಅವರ ಇಷ್ಟದಂತೆ ನಡೆದಲ್ಲಿ ತೊಂದರೆಯ ಬದಲು ಉಪಕಾರವೇ ಆಗಬಹುದೆಂದು ಭಾವಿಸಿ, "ಅಗತ್ಯವಾಗಿ ಆಗಲಿ" ಎಂದು ಹೇಳಿದ.

ಯಾವುದೋ ಹೋಟಲಿನಲ್ಲಿ ಊಟಮಾಡಿ, ನಡೆದ ವಿಷಯಗಳನ್ನೆಲ್ಲಾ ವಿಶದವಾಗಿ ಕಿಟ್ಟುವಿಗೆ ಪತ್ರ ಬರೆದು, ಶಾಮನು ಶರಣಪ್ಪನವರ ಮನೆಯ ಬಳಿಗೆ ಹೋದಾಗ, ಮಧ್ಯಾಹ್ನ ಸುಮಾರು ೨ ಘಂಟೆಯಾಗಿತ್ತು. ಶರಣಪ್ಪನವರು ಮನೆಯಲ್ಲೇ ಇದ್ದರು. ಶಾಮನು ಬಂದುದನ್ನು ಕೇಳಿ ಅವನನ್ನು ಒಳಗೆ ಬರಮಾಡಿ, ಹೇಳಿದ್ದ ಕಾಲಕ್ಕೆ ಸರಿಯಾಗಿ ಬಂದ ಅವನ ಗುಣವನ್ನು ಮನಸ್ಸಿನಲ್ಲಿಯೇ ಮೆಚ್ಚಿಕೊಂಡರು. ಕುರ್ಚಿಯೊಂದರಮೇಲೆ ಕೂರುವಂತೆ ತಿಳಿಸಿ, ತಾವೂ ಎದುರಿಗೆ ಕುಳಿತು, ಸ್ವಲ್ಪ ಕಾಫಿಯನ್ನು ಅವನಿಗೂ ಕೊಟ್ಟು ತಾವೂ ಕುಡಿದನಂತರ "ಎಷ್ಟು ದಿನದಿಂದ ಸ್ವಾಮಿನಾಥರ ಬಳಿ ಇದ್ದೆಯಪ್ಪಾ?" ಎಂದು ಪ್ರಶ್ನಿಸಿದರು.

"ಸುಮಾರು ೨ ತಿಂಗಳಾಗಿತ್ತು."

"ಅಷ್ಟು ಬೇಗ ಕೆಲಸ ಬಿಡಲು ಕಾರಣ"

"ಏನೋ ನನಗೆ ಬೇಸರವಾಯಿತು. ಆದರಿಂದ ಬಿಟ್ಟೆ."

"ಏನು ಓದಿದ್ದೀಯಪ್ಪಾ ನೀನು."

"ಮದರಾಸಿನಲ್ಲಿ ಇಂಟರ್‌ವರಿಗೆ ಓದಿದೆ ನಂತರ ಯಾವುದಾದರೂ ಜನಸೇವೆಯ ಕಾರ್ಯವನ್ನು ಮಾಡೋಣವೆಂದು ಮುಂದೆ ಓದಲಿಲ್ಲ"

"ನಿನ್ನಂತ ಹುಡುಗ ಮುಂದೆ ಓದದೆ, ಸ್ವಾಮಿನಾಥರ ಬಳಿ ಕೆಲಸಕ್ಕೆ ಸೇರಿದ್ದು ನನಗೆ ತುಂಬಾ ಆಶ್ಚರ್ಯ."

"ನಾನೇ ಹೋಗಿ ನನ್ನ ಧ್ಯೇಯವನ್ನು ತಿಳಿಸಿ ಅವರಲ್ಲಿ ಸೇರಿಕೊಂಡಿದ್ದೆ."

"ಅವರು ಮಾಡುವುದು ಕೇವಲ ಸಾರ್ವಜನಿಕ ಕೆಲಸವಾದ್ದರಿಂದ ನಿನಗೆ ಸಂಬಳ ಹೆಚ್ಚು ಕೊಡುತ್ತಿರಲಿಲ್ಲವೆಂದು ಕಾಣುತ್ತೆ."

"ಸಂಬಳವೇನೋ ಹೆಚ್ಚಾಗಿರಲಿಲ್ಲ. ಆದರೆ ಹಣ ನನಗೆ ಮುಖ್ಯವಲ್ಲ ವೆಂದು ನಾನೇ ತಿಳಿಸಿದ್ದೆ."

"ಮತ್ತೆ ಕೆಲಸ ಬಿಡಲು ಕಾರಣ, ಸ್ವಾಮಿನಾಥರಲ್ಲಿ ತಪ್ಪೇನಾದರೂ ಕಂಡಿತೇ."

ಶಾಮನಿಗೆ ಉತ್ತರ ಹೇಳಲು ತೋಚಲಿಲ್ಲ. ಆದರೂ ಇವರಿಗ್ಯಾಕೆ ಸ್ವಾಮಿನಾಥರ ವಿಷಯ ಎನ್ನಿಸಿತು. ಇತರ ಜನರಲ್ಲಿನ ಕುಂದು ಕೊರತೆ ಗಳನ್ನು ತಿಳಿಯಲು ಶರಣಪ್ಪನವರು ಬಹು ಕಾತುರತೆಯಿಂದ ಇರುವಂತೆ

ಅವನಿಗೆ ಭಾಸವಾಯ್ತು. ಯೋಚನೆಯಲ್ಲಿ ಕಾಲ ಕಳೆಯದೆ "ತಪ್ಪೇನೂ ಕಾಣಲಿಲ್ಲ. ನನಗೇ ಬೇಸರವಾಯಿತು" ಎಂದು ಅವರ ಪ್ರಶ್ನೆಗೆ ಉತ್ತರ ಹೇಳಿದ. ಶರಣಪ್ಪನವರೇ ಪುನಃ ಮಾತಿಗೆ ಪ್ರಾರಂಭಿಸಿ, "ನೀನು ಹೇಗೂ ಸ್ವದೇಶ ಪ್ರೇಮಿ. ನಮ್ಮ ಸಂಸ್ಥೆಗೆ ಸೇರಿರುವಿ ಎಂದು ನಿನ್ನ ಒಟ್ಟೆ, ಬರೆ, ಮುಖದ ಕಳೆಯಿಂದ ತಿಳಿಯುತ್ತೆ. ಆದ್ದರಿಂದ ಮುಂದೆ ಕೆಲಸ ಹುಡುಕುವ ಬದಲು ನಮ್ಮಲ್ಲಿಯೇ ಯಾತಕ್ಕೆ ಇರಬಾರದು. ಮುದರಾಸಿನವನಾದುದರಿಂದ ಅಲ್ಲಿನ ಸಂಸ್ಥೆಯ ಕಾರ್ಯಕಲಾಪಗಳೆಲ್ಲಾ ನಿನಗೆ ವೇದ್ಯವೇ ಇರಬಹುದು" ಎಂದರು. ಇದನ್ನೂ ನೋಡಿಬಿಡುವುದೇ ಒಳ್ಳೆಯದೆಂದು ಶಾಮನು ಸಂಬಳ, ಕೆಲಸದ ರೀತಿ ಒಂದನ್ನೂ ಪ್ರಶ್ನಿಸದೆ, "ಆಗಲಿ" ಎಂದು ಒಪ್ಪಿದ.

ಶರಣಪ್ಪನವರ ಮನೆಯಲ್ಲೇ ಇರಲು ಶಾಮನಿಗೆ ಸ್ಥಳವಿರಲಿಲ್ಲ. ಆದ್ದರಿಂದ ಒಂದು ಹೋಟೆಲಿನಲ್ಲಿ ಊಟಕ್ಕೂ ತಿಂಡಿಗೂ ಏರ್ಪಡಿಸಿಕೊಂಡು ಸಂಸ್ಥೆಯ ಕಚೇರಿಯಲ್ಲೇ ಮಲಗುವುದೆಂದು ನಿರ್ಧರಿಸಿದ. ಶರಣಪ್ಪನವರೂ ಶಾಮನ ಧೈರ್ಯ, ಸರಳ ಹೃದಯ, ಆಡಿದ ಮಾತಿಗೆ ತಪ್ಪದ ಗುಣ ಇವುಗಳನ್ನೆಲ್ಲಾ ಚೆನ್ನಾಗಿ ಒಪ್ಪಿದರು. ಅಂತೆಯೇ ಅವನು ಮಾಡಬೇಕಾದ ಕೆಲಸಗಳನ್ನು ನಗುನಗುತ್ತಾ ತಿಳಿಸಿ, ಅವನಿಂದ ಕೆಲಸವನ್ನು ತೆಗೆದುಕೊಳ್ಳುತ್ತಿದ್ದರು. ಶಾಮನಿಗೂ ಕೆಲವು ದಿನದಲ್ಲೇ ಶರಣಪ್ಪನವರಲ್ಲಿ ಅನೇಕ ಆದರ್ಶ ಗುಣಗಳು ಕಂಡುಬಂದವು ಈ ಸಂಸ್ಥೆಗೆ ಜನರು ಕೊಡುತಿರುವ ಬೆಂಬಲ, ಪ್ರೋತ್ಸಾಹ, ಸಂಸ್ಥೆಗೆ ಜಯವಾಗಬೇಕೆಂದು ಅವರು ಪಡುತ್ತಿರುವ ಕಷ್ಟ ತೊಂದರೆಗಳನ್ನೆಲ್ಲಾ ನೋಡಿ, ಶಾಮನ ಮನಸ್ಸಿಗೆ ಅಂತೂ ಜನಸೇವಾ ಕಾರ್ಯಕ್ಕೆ ಬಂದು ಸೇರಿದೆನಲ್ಲಾ ಎಂದು ಸಂತಸವಾಯಿತು. ಶರಣಪ್ಪನವರು ವಕೀಲು ಪರೀಕ್ಷೆಗೆ ಓದಿ, ಕೈತುಂಬಾ ಹಣ ದುಡಿಯುತ್ತಿದ್ದಾಗಲೇ ಎಲ್ಲವನ್ನೂ ತ್ಯಜಿಸಿ, ಈ ಕಾರ್ಯಕ್ಕೆ ಟೊಂಕ ಕಟ್ಟಿದರೆಂದು ತಿಳಿದಮೇಲಂತೂ ಅವನ ಮನಸ್ಸಿಗೆ, ಸಮಾಜದಲ್ಲಿ ಆಷಾಡಭೂತಿಗಳಿರುವಂತೆ ನಿಜವಾದ ತ್ಯಾಗಿಗಳೂ ಇದ್ದಾರೆನ್ನುವುದು ಸುಳ್ಳಲ್ಲವೆಂದು ತೋರಿತು.

ದಿನ ದಿನಕ್ಕೆ ಶಾಮನ ಪಾಲಿಗೆ ಕೆಲಸವು ಹೆಚ್ಚಾಗುತ್ತಾ ಬಂದಿತು. ಕಿಟ್ಟುವಿಗೆ ಕಾಗದ ಬರೆಯಲು ಸಹಾ ವಿರಾಮವಾಗುತ್ತಿರಲಿಲ್ಲ. ಆದರೂ ವಾರಕ್ಕೆ ಒಂದು ಸಾರಿ ಒಂದೆರಡು ಪಂಕ್ತಿಗಳನ್ನಾದರೂ ಬರೆಯದಿದ್ದರೆ

ಅವನಿಗೆ ಸಮಾಧಾನವಾಗುತ್ತಿರಲಿಲ್ಲ. ಶಾಮನಂತೆ ಇನ್ನೂ ಅನೇಕ ತರುಣರು ಈ ಸಂಸ್ಥೆಯಲ್ಲಿ ದುಡಿಯುತ್ತಿದ್ದರು. ಅವರ ಪೈಕಿ ಶಾಮನ ಸ್ನೇಹವು ಮೂರ್ತಿಯೊಂದಿಗೆ ಚೆನ್ನಾಗಿ ಬೆಳೆಯುತ್ತಾ ಬಂದಿತು. ಯಾಕೆಂದರೆ, ಇಬ್ಬರೂ ಬೆಳಗಿನಿಂದ ರಾತ್ರಿಯವರೆವಿಗೂ ಒಟ್ಟಿಗೇ ಇರುತ್ತಿದ್ದರು. ಎಷ್ಟು ಕೆಲಸ ಬಂದರೂ ಶಾಮನು ಸಂತೋಷದಿಂದ ಮಾಡುತ್ತಿದ್ದ. ಇದಕ್ಕೆ ಕಾರಣ ಶರಣಪ್ಪನವರಲ್ಲಿ ಅವರು ಕಂಡಿದ್ದ ತತ್ವಪ್ರತಿಪಾದನೆಯ ರೀತಿ, ನಿಸ್ವಾರ್ಥತೆ, ಮುಂತಾದ ಆದರ್ಶ ಗುಣಗಳೇ ಆಗಿತ್ತು. ಶರಣಪ್ಪನವರ ಮನೆಯಲ್ಲೂ ಯಾವ ಆಡಂಬರವೂ ಇರಲಿಲ್ಲ—ಐಶ್ವರ್ಯದ ಚಿಹ್ನೆಗಳಂತೂ ಹುಡುಕಿದರೂ ಸಿಗುತ್ತಿರಲಿಲ್ಲ ಶರಣಪ್ಪನವರ ಮಡದಿ ಗೌರಮ್ಮನವರು ಐಶ್ವರ್ಯವಂತರ ಮನೆಯಲ್ಲಿ ಹುಟ್ಟಿ ಬೆಳೆದಿದ್ದರೂ ಗಂಡನಂತೆಯೇ ಸ್ವದೇಶಿ ಪ್ರೇಮಿಗಳಾಗಿದ್ದುದರಿಂದ ಅವರ ದಾಂಪತ್ಯವು ಅನ್ಯೋನ್ಯವಾಗಿತ್ತು. ಗೌರಮ್ಮನವರೂ ಸಾಕಷ್ಟು ವ್ಯಾಸಂಗಮಾಡಿದ್ದರು. ಉಪದೇಶ, ಉಪನ್ಯಾಸ, ಭಾಷಣ, ಮುಂತಾದ ಕಾರ್ಯಗಳಲ್ಲಿ ಅವರದು ಎತ್ತಿದ ಕೈ. ಕೇವಲ ಎರಡು ತಿಂಗಳಿನಲ್ಲೇ ಶಾಮನಿಗೆ ಅವರ ವಿಷಯದಲ್ಲಿ ಪೂಜ್ಯಭಾವನೆಯು ತಲೆದೋರಿತು—ಸಹಸ್ರಾರು ಜನರು ಮರುಮಾತಾಡದೆ ಶರಣಪ್ಪನವರನ್ನು ಹಿಂಬಾಲಿಸಲು ಅವರ ಸರಳ ಜೀವನ, ತ್ಯಾಗವೇ ಕಾರಣವೆಂದು ದೃಢವಾಯಿತು. ಎಲ್ಲಿ ಶರಣಪ್ಪನವರು ಭಾಷಣಮಾಡಲಿ, ಎಲ್ಲಿ ಅಧ್ಯಕ್ಷತೆ ವಹಿಸಲಿ, ಸಾವಿರಾರು ಜನರು ತಪ್ಪದೆ ಸೇರುತ್ತಿದ್ದರು. ಅಧಿಕಾರಿಗಳು ಸಹಾ ಅವರ ವಿಷಯದಲ್ಲಿ ಎಚ್ಚರಿಕೆಯಿಂದಲೇ ಇದ್ದರೆನ್ನುವುದು ಶಾಮನಿಗೂ ಒಂದೆರಡು ಸನ್ನಿವೇಶಗಳಿಂದ ತಿಳಿದಿತ್ತು. ಯಾರು ಹೇಗೆ ಟೀಕಿಸಲಿ, ಎರಡು ಮಾತಾಡಲಿ, ಶರಣಪ್ಪನವರು ಲಕ್ಷಿಸುತ್ತಿರಲಿಲ್ಲ. ಅವರಿಗೆ ಯಾವ ಭಯವೂ ಇರಲಿಲ್ಲ—ತಮ್ಮ ಧ್ಯೇಯದಂತೆ ನಡೆಯುವುದೇ ಅವರ ಕೆಲಸವಾಗಿತ್ತು.

ಶರಣಪ್ಪನವರ ಬಳಿ ಶಾಮನು ಕೆಲಸಕ್ಕೆ ಸೇರಿದಮೇಲೆ ಹರಿಜನೋದ್ಧಾರಕ ಸ್ವಾಮಿನಾಥರೂ ಒಂದೆರಡು ಬಾರಿ ಶರಣಪ್ಪನವರ ಹತ್ತಿರಕ್ಕೆ ಯಾವುದೋ ವಿಷಯಗಳನ್ನು ಮಾತಾಡಲು ಬಂದಿದ್ದರು. ಮೊದಲನೆಯ ಸಲ ಅವರು ಬಂದಾಗ ಅಲ್ಲಿ ಶಾಮನು ಇದ್ದುದನ್ನು ಕಂಡು ಅವರ ಮುಖದಲ್ಲಿನ ಕಳೆಯೇ ಕುಂದಿತ್ತು. ಆದರೆ ತಮ್ಮ ವಿಷಯವನ್ನೇನೂ ಶಾಮನು

ಎಲ್ಲಿಯೂ ಪ್ರಸ್ತಾಪಮಾಡಿಲ್ಲವೆಂದು ತಿಳಿದು ಧೈರ್ಯವಾದಮೇಲೆ ಅವರೂ ಕೂಡ ಶಾಮನ ಗುಣವನ್ನು ಮೆಚ್ಚಿ, ಅವನನ್ನು ಮಾತಾಡಿಸುತ್ತಾ, "ನಿನ್ನಲ್ಲಿ ಕೆಲವು ಒಳ್ಳೆಯ ಗುಣಗಳಿವೆ" ಎಂದು ತಿಳಿಸಿದರು. ಶಾಮನಿಗೆ ಮಾತ್ರ ಅದು ಒಳ್ಳೆಯ ಗುಣವೇ ಅಥವಾ ಕೆಟ್ಟದ್ದೇ ಎನ್ನುವುದು ತುಂಬಾ ಅನುಮಾನಾಸ್ಪದವಾಯಿತು.

ಮೂರುತಿಂಗಳು ಯಾವ ವಿಶೇಷವೂ ಇಲ್ಲದೆ ಕಾಲವು ಮುಂದೆ ಹೋಯಿತು. ಹಿಂದಿನ ನೆನಪುಗಳನ್ನೇ ಮನಸ್ಸಿನಲ್ಲಿ ತಿರುವಿಹಾಕುತ್ತಾ ಶಾಮನು ಒಂದು ಸಂಜೆ ತನ್ನ ಕೋಣೆಯಲ್ಲಿ ಕುಳಿತಿದ್ದಾಗ, ಅವನಂತೆ ಶ್ರಮ ವಹಿಸಿ ಕೆಲಸಮಾಡುತ್ತಿದ್ದ ಮೂರ್ತಿಯು ಆಶ್ಚರ್ಯದಿಂದಲೂ, ಅವಸರ ದಿಂದಲೂ ಬಂದು "ಶಾಮು, ಕೇಳಿದೆಯಾ, ಸಮಾಚಾರ! ಶರಣಪ್ಪನವರು ನಾಳೆ ಸಂಜೆ 'ಸರ್ಕಾರದ ಧೋರಣೆ' ಎಂಬ ವಿಷಯವಾಗಿ, ಬಹಿರಂಗ ಸಭೆಯಲ್ಲಿ ಭಾಷಣಮಾಡಿ, ಸರ್ಕಾರದ ರೀತಿ ನೀತಿಗಳನ್ನು ಕಟುತರವಾಗಿ ಖಂಡಿಸುತ್ತಾರಂತೆ" ಎಂದು ತಿಳಿಸಿದ. ಶಾಮನಿಗೆ ಶರಣಪ್ಪನವರ ಧೈರ್ಯವನ್ನು ಕೇಳಿ ಸಂತೋಷವೇ ಆಯಿತು. ಮಾರನೆಯ ದಿನ ಭಾಷಣವನ್ನು ಕೇಳಲು ಅಸಂಖ್ಯಾತ ಜನರು ಸೇರಿದರು ಸುತ್ತಮುತ್ತಲಿನ ಹಳ್ಳಿಯವರೆಲ್ಲಾ ಉಪನ್ಯಾಸ ಕೇಳಲು ಬಂದಿದ್ದರು ಸಂಜೆ ೫ ಘಂಟೆಗೆ ಸರಿಯಾಗಿ ಪ್ರಾರಂಭವಾದ ಭಾಷಣ ಸುಮಾರು ೩ ಘಂಟೆಗಳ ಕಾಲ ಅವಿಚ್ಛಿನ್ನವಾಗಿ ನಡೆಯಿತು. ತಮ್ಮ ನಿರರ್ಗಳವಾದ ಶೈಲಿಯಲ್ಲಿ ಸರ್ಕಾರವು ಅನುಸರಿಸುತ್ತಿರುವ ಕ್ರಮಗಳು ಒಂದೂ ಸರಿಯಲ್ಲವೆಂದೂ, ಪ್ರಜೆಗಳ ಆಕಾಂಕ್ಷೆಗಳನ್ನು ಗಮನಕ್ಕೆ ತಂದು ಕೊಂಡಿಲ್ಲವೆಂದೂ ಶರಣಪ್ಪನವರು ವಾಕ್ಪ್ರವಾಹವನ್ನು ಹರಿಸಿ, ನಾನಾರೀತಿಯಲ್ಲಿ ಈಗ ನಡೆಯುತ್ತಿರುವ ಸರ್ಕಾರಿ ಕೆಲಸಗಳು ನ್ಯಾಯವಾದುದಲ್ಲವೆಂದು ಟೀಕಿಸಿ, ಉಪನ್ಯಾಸವನ್ನು ಮುಗಿಸುವಷ್ಟು ಹೊತ್ತಿಗೆ ೮ ಘಂಟೆಯು ಮೇಲಾಗಿತ್ತು. ಭಾಷಣವನ್ನು ಕೇಳಿದ ಅನೇಕ ಮೇಧಾವಿಗಳು ಶರಣಪ್ಪನವರ ಮೇಲೆ ಸರ್ಕಾರವು ಯಾವುದಾದರೂ ತೀಕ್ಷ್ಣವಾದ ಕ್ರಮವನ್ನು ತೆಗೆದು ಕೊಳ್ಳಬಹುದೆಂದು ಯೋಚಿಸಿದರು.

ಎರಡು ದಿನಗಳನಂತರ ಶಾಮನು ಅವರ ಮನೆಯಲ್ಲಿದ್ದಾಗಲೇ ಸರ್ಕಾರ ದಿಂದ ಶರಣಪ್ಪನವರಿಗೆ ಕರೆ ಬಂದಿತು. ಬಹುಶಃ ಯಾವುದೋ ಅನಿಷ್ಟವು

ಕಾದಿದೆಯೆಂದು ಶಾಮನು ಯೋಚಿಸಿ, ತನ್ನ ಕೋಣೆಗೆ ಹಿಂದಿರುಗಿದ. ಶಾಮನ ಮನಸ್ಸಿಗೆ ಸ್ವಲ್ಪವೂ ಸಮಾಧಾನವಿರಲಿಲ್ಲ ಶರಣಪ್ಪನವರಿಗೆ ಏನಾಯಿತೋ—ಯಾವ ಸಂಕಟವು ಪ್ರಾಪ್ತವಾಯಿತೋ ಎನ್ನುವುದೇ ಅವನ ಯೋಚನೆ. ಸಂಜೆಯವರಿವಿಗೂ ಶರಣಪ್ಪನವರು ಮನೆಗೆ ಹಿಂದಿರುಗಲಿಲ್ಲ. ಶಾಮನು ಯಾವ ವರ್ತಮಾನವನ್ನೂ ತಿಳಿಯದೆ, ರಾತ್ರಿಯೆಲ್ಲಾ ಹಾಸಿಗೆಯ ಮೇಲೆ ಹೊರಳಾಡಿ ಪ್ರಾತಃಕಾಲವೇ ಎದ್ದು ಅವರ ಮನೆಯ ಕಡೆ ಧಾವಿಸಿದ. ಶರಣಪ್ಪನವರ ಮನೆಯೊಳಕ್ಕೆ ಶಾಮನು ನಿರಾತಂಕವಾಗಿ ಪ್ರವೇಶಿಸಬಹುದಾಗಿತ್ತು. ವರಂಡಾದಲ್ಲಿ ಶಾಮನು ಕಾಲಿಡುತ್ತಲೇ ಶರಣಪ್ಪನವರು ತಮ್ಮ ಹೆಂಡತಿಯೊಂದಿಗೆ ಕೋಣೆಯಲ್ಲಿ ಮಾತಾಡುತ್ತಿದ್ದ ಶಬ್ದ ಕೇಳಿಸಿತು. ಅಲ್ಲಿಯೇ ಇದ್ದ ವೃತ್ತಪತ್ರಿಕೆಯನ್ನು ನೋಡುತ್ತಾ ನಿಂತಿದ್ದಂತೆಯೇ ಶರಣಪ್ಪನವರ ಮಾತುಗಳು ಕಿವಿಗೆ ಬಿದ್ದಿತು. ಬೇರೆಯವರು ಮಾತಾಡುವುದನ್ನು ಕೇಳಬಾರದೆಂಬ ನಿಯಮವು ಶಾಮನಿಗೆ ಗೊತ್ತಿದ್ದರೂ ಅಂದು ಮಾತ್ರ ಶರಣಪ್ಪನವರಿಗೆ ಏನಾಯಿತೋ ಎಂದು ಕುತೂಹಲದಿಂದ ವಿಷಯವನ್ನು ತಿಳಿಯಲು ಆತುರನಾಗಿದ್ದುದರಿಂದ, ಹೊರಗೆ ಹೋಗದೆ ನಿಂತಿದ್ದಂತೆಯೇ ಮಾತುಗಳನ್ನು ಕೇಳಲಾರಂಭಿಸಿದ.

"ಸುಮಾರು ೩-೪ ಘಂಟೆ ಮಾತು ಆಡಿದ್ದೇ ಆಡಿದ್ದು" (ಶರಣಪ್ಪನವರ ಧ್ವನಿ)

"ಮುಖ್ಯವಾದ ಸಾರವೇನು, ಮೊದಲಿನಷ್ಟೇನೋ, ಅಥವಾ . . ."

"ಅಷ್ಟೇ . . . ಅವರ ರಾಗ ಅವರು ಬಿಡೋಲ್ಲ. ಮುನ್ಸೀಫ್ ಕೆಲಸ ಕೊಡ್ತೀನೀಂತ ಅವರು—ಇಲ್ಲ ಕೊನೆಗೆ ಸಬ್‌ಜಡ್ಜಿ ಕೆಲಸಕ್ಕಿಂತ ಕಮ್ಮಿಯಾದರೆ ಸಾಧ್ಯವಿಲ್ಲಾಂತ ನಾನು."

"ಹಾಗೆ ಒಪ್ಪೋ ಹಾಗಿದ್ರೆ ೧೦ ವರ್ಷದ ಹಿಂದೇನೆ ಮುನ್ಸೀಫ್ ಕೆಲ್ಸಕ್ಕೆ ಹೋಗಬಹುದಾಗಿತ್ತಲ್ಲಾ."

"ಅದೇ ನಾನೂ ಅವರ ತಲೆಗೆ ತಿಳಿಸಲು ಪ್ರಯತ್ನಿಸಿದ್ದು. ನೋಡೋಣ ಮುಂದೆ ಏನಾಗುತ್ತೋ." ಶರಣಪ್ಪನವರು ಮಾತನ್ನು ಪೂರೈಸಿ ಹೊರಗೆ ಬಂದರು. ಅವರನ್ನು ನೋಡಿದರೂ ಶಾಮನ ಬಾಯಿಂದ ಶಬ್ದವೇ ಹೊರಡಲಿಲ್ಲ—ಕೈಲಿ ಹಿಡಿದಿದ್ದ ಪತ್ರಿಕೆಯು ಕೆಳಗೆ ಬಿದ್ದಿದ್ದರೂ ಅವನಿಗೆ ಜ್ಞಾನ

ವಿರಲಿಲ್ಲ—ಬುದ್ಧಿಯೇ ಶೂನ್ಯವಾದವನಂತೆ ಶರಣಪ್ಪನವರನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದ ಶಾಮುನನ್ನು ಕಂಡು, ಅವರೇ ನಗುತ್ತಾ "ಏನು ಶಾಮು, ಸಮಾಚಾರ" ಎಂದರು. ಒಂದೆರಡು ನಿಮಿಷ ಆದನಂತರ ತಬ್ಬಿಬ್ಬಾದವನಂತೆ "ಏನೂ ಇಲ್ಲ—ನೆನ್ನೆ ವಿಷಯ ಏನಾಯಿತೆಂದು ತಿಳಿಯಲು ಬಂದೆ" ಎಂದು ಉತ್ತರಕೊಟ್ಟ. ಶರಣಪ್ಪನವರು ನಗುತ್ತಲೇ "ಅಯ್ಯೋ, ಏನು ಮಾಡಿ ಯಾರು? ನನಗೇ ಉಪದೇಶ ಕೊಡಲು ಕರೆಸಿದ್ದರು" ಎಂದು ಹೇಳಿ ಕುರ್ಚಿಯಮೇಲೆ ಕುಳಿತು ತಮ್ಮ ಭಾಷಣದ ಸಾರಾಂಶ ದೊಡ್ಡ ಅಕ್ಷರಗಳಲ್ಲಿ ಮುದ್ರಿತವಾಗಿದ್ದ ವಿಷಯವನ್ನು ನೋಡಲಾರಂಭಿಸಿದರು. ಮುಂದೆ ಏನು ಮಾತಾಡಬೇಕೆನ್ನುವುದು ಶಾಮುನಿಗೆ ತಿಳಿಯಲಿಲ್ಲ. "ಕುಳಿತುಕೋ, ಕಾಫಿ ತೆಗೆದುಕೊಂಡುಹೋಗು" ಎಂದು ಹೊರಗೆ ಬಂದು ಗೌರಮ್ಮನವರು ಹೇಳಿ ದರೂ, "ಬೇರೆ ಕೆಲಸವಿದೆ, ಪುನಃ ಬರುತ್ತೇನೆಂದು" ಹೇಳುತ್ತಾ, ಶಾಮುನು ಹಿಂದಿರುಗಿದ ತನ್ನ ಕೋಣೆಗೆ ಬಂದಮೇಲೆ ತಲೆಯನ್ನು ಚೆನ್ನಾಗಿ ಪರಚಿ ಕೊಳ್ಳಲೇ ಎನ್ನಿಸಿತು ಶಾಮುನಿಗೆ—ಎಲೆಯ ಮುಂದೆ ಕುಳಿತರೂ ಊಟ ಸೇರ ಲಿಲ್ಲ. ತಾನು ಕಾಣುತ್ತಿರುವ ಪದಾರ್ಥಗಳೆಲ್ಲಾ ನಿಜವೇ, ಸುಳ್ಳೇ ಎಂಬ ಅನುಮಾನವೇ ಪ್ರತಿ ನಿಮಿಷ ಅವನ ತಲೆಯನ್ನು ತಿನ್ನಲಾರಂಭಿಸಿತು. ಪ್ರಪಂಚದಲ್ಲಿ ನಡೆಯುವ ಸ್ವಾಭಾವಿಕ ವ್ಯವಹಾರಗಳಿಗೆ ಅನುಗುಣವಾದ ಬುದ್ಧಿ ತನ್ನಲ್ಲಿಯೇ ಇಲ್ಲವೇ ಎಂದು ಒಮ್ಮೊಮ್ಮೆ ಯೋಚನೆ ಬರುತ್ತಿತ್ತು. ಮತ್ತೊಮ್ಮೆ ತಾನು ಮಾಡುವ ಕೆಲಸವೇ ಸರಿ, ಆದರೆ ನಮ್ಮ ಸಮಾಜದ ಜನರು ಇವರಿಗೇ ಅಡ್ಡಹಾದಿ ಎಂದುಕೊಳ್ಳುವನು. ಅಂತೂ ಊಟದ ಶಾಸ್ತ್ರ ಮುಗಿಸಿ ಸಂಜೆ ಪದ್ಧತಿಯಂತೆ ಕಚೇರಿಯ ಹತ್ತಿರಕ್ಕೆ ಹೋದೊಡನೆ, ಮೂರ್ತಿಯು "ಏನು ಶಾಮು, ಶರಣಪ್ಪನವರಿಗೆ ಸಬ್‌ಜಡ್ಜಿ ಕೆಲಸವಂತೆ" ಎಂದು ತನಗೆ ಆಗತಾನೆ ದೊಡ್ಡ ಕಚೇರಿಯಿಂದ ತಿಳಿದ ವಿಷಯವನ್ನು ವಿಸ್ಮಯ ದಿಂದ ಹೇಳಿದ. ಶಾಮುನಿಗೆ ಮುಂಚೆಯೇ ಗೊತ್ತಿದ್ದುದರಿಂದ ಆಶ್ಚರ್ಯವೇನೂ ಆಗಲಿಲ್ಲ. "ಸರಿ, ನಾವು ಮುಂದೇನು ಮಾಡಬೇಕು—ಶರಣಪ್ಪನವರಿದ್ದಾಗ ಒಳ್ಳೇ ತತ್ವ ಪ್ರತಿಪಾದಿಸುವರಂತೆ ಶಿಸ್ತನ್ನಿಟ್ಟಿದ್ದರು—ಕೆಲಸವೂ ನಡೆಯು ತ್ತಿತ್ತು. ಅಂತಹವರೇ, ಹೀಗಾದಮೇಲೆ ಇನ್ನು ಮುಂದೆ ಗತಿ" ಎಂದು ಮೂರ್ತಿಯು ಪ್ರಶ್ನಿಸುತ್ತಲೇ, ಶಾಮುನು ನಿಧಾನವಾಗಿ "ಒಬ್ಬರಿದ್ದಂತೆಯೇ

ಇನ್ನೊಬ್ಬರು ಇರುತ್ತಾರೆಯೇ ಮೂರ್ತಿ. ಸ್ವಪ್ರಯೋಜನಕ್ಕಾಗಿಯೇ ಆಟ ವಾಡುವವರು ಕೆಲವರಿದ್ದಾಗ್ಯೂ, ತನು ಮನ ಧನಗಳಿಂದ ದೇಶಸೇವೆ ಮಾಡುವವರು ಇಲ್ಲವೆನ್ನುವುದಕ್ಕೆ ಆಗುತ್ತದೆಯೇ ಆದರೆ ಯಾವ ಮನುಷ್ಯ ಹೇಗೆ, ಅವನ ಧ್ಯೇಯವೇನು ಎನ್ನುವುದು ಮಾತ್ರ ಸಾಧಾರಣವಾಗಿ ತಿಳಿಯುವುದಿಲ್ಲ" ಎಂದ. ಮೂರ್ತಿಯು ಕೂಡ ಆ ಸಂಸ್ಥೆಯಲ್ಲಿ ಶರಣಪ್ಪನವರೊಂದಿಗೆ ಹಲವು ವರ್ಷಗಳು ದುಡಿದಿದ್ದ. ಅವನಿಗು ಜನರ ಮನಸ್ಸು ಬದಲಾವಣೆಯಾಗುತ್ತಿರುವುದನ್ನೂ, ಪ್ರಪಂಚದ ಬಹು ಭಾಗವು ಕೇವಲ ಸ್ವಾರ್ಥಕ್ಕಾಗಿಯೇ ಒದ್ದಾಡುತ್ತಿರುವುದನ್ನೂ ನೋಡಿ ನೋಡಿ ಜಿಗುಪ್ಸೆಯಾಗಿತ್ತು. "ಶಾಮು, ನನಗೇನೋ ಬೇಜಾರಾಗಿದೆ. ಈ ಕೆಲಸ ಬಿಡುತ್ತೇನೆ. ನನ್ನಿಂದ ಸಾಧ್ಯವಿಲ್ಲ" ಎಂದ. ಶಾಮುನಿಗೂ ಅದೇ ಮನಸ್ಸು ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸಬ್‌ಜಡ್ಜಿ ಕೆಲಸದ ಸೂತ್ರವನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ ಶರಣಪ್ಪನವರು ಮರೆಯದೆ ಶಾಮುನಿಗೆ ಬರುವಂತೆ ಹೇಳಿಕಳುಹಿಸಿದ್ದರು. ಆದರೆ ಅವರ ಮುಖದರ್ಶನವೂ ಅವನಿಗಿಷ್ಟವಿರಲಿಲ್ಲ. ಮಾರನೆಯ ದಿನದಿಂದ ತನ್ನ ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿದ. ಕೈಯಲ್ಲಿ ಇನ್ನೂ ಕೆಲವು ದಿನಗಳಿಗೆ ಆಗುವಷ್ಟು ಹಣವಿದ್ದುದರಿಂದ ಊಟಕ್ಕ ಭಯವಿಲ್ಲವೆಂದು ಅವನಿಗೆ ಸಮಾಧಾನವಾಯಿತು. ಆದರೆ, ಸಂಜೆ ಪೇಟೆಯಲ್ಲಿ ಮೂರ್ತಿಯೊಂದಿಗೆ ಹೋಗುತ್ತಿದ್ದಾಗ ಅದೇ ದಿನ ಸರ್ಕಾರಿ ಕೆಲಸವನ್ನು ವಹಿಸಿ, ಜರೀ ಪೇಟಾದಿಂದ ಅಲಂಕೃತರಾಗಿದ್ದ ಸಬ್‌ಜಡ್ಜಿ ಶರಣಪ್ಪನವರ ದರ್ಶನವಾಯಿತು. ಶರಣಪ್ಪನವರೇ ಶಾಮುನನ್ನು ಮಾತಾಡಿಸಿ ತಮ್ಮ ಮೋಟಾರಿನಲ್ಲಿ ಮನೆಗೆ ಕರೆದುಕೊಂಡುಹೋದರು. ಮೂರ್ತಿ, ಶಾಮು ಇಬ್ಬರೂ ಶರಣಪ್ಪನವರ ಮನೆಗೆ ಹೋಗಲೇಬೇಕಾಯಿತು. ಎಂದಿನಂತೆ ಕಾಫಿ, ಹಣ್ಣು ಆದಮೇಲೆ ಶರಣಪ್ಪನವರು ನಸುನಗುತ್ತಾ "ನಾನೊಬ್ಬನಿಲ್ಲದಿದ್ದರೆ ಸಂಸ್ಥೆಯ ಧ್ಯೇಯಗಳು ನಿಲ್ಲುವುದಿಲ್ಲ. ನೀವೆಲ್ಲಾ ಎಂದಿನಂತೆ ಕಲಸಮಾಡಿ. ಶಾಮು, ನೀನು ಬಹಳ ಚೆನ್ನಾಗಿ ಕೆಲಸಮಾಡಿರುತ್ತೀ. ನನ್ನಿಂದ ನಿನಗೆ ಯಾವ ಸಹಾಯಬೇಕಿದ್ದರೂ ಮಾಡಲು ನಾನು ಸದಾ ಕಾಲದಲ್ಲಿಯೂ ಸಿದ್ಧವಾಗಿರುತ್ತೇನೆ" ಎಂದರು. ಮೂರ್ತಿ ಮಾತಾಡಲಿಲ್ಲ. ಆದರೆ ಶಾಮುನಿಗೆ ಅವರ ಮಾತುಗಳು ವ್ಯಂಗ್ಯವಾಗಿ ತೋರಿತು.

"ಒಬ್ಬರಿಲ್ಲದ ಮಾತ್ರಕ್ಕೆ ಸಂಸ್ಥೆಯ ಧ್ಯೇಯಗಳು, ಕೆಲಸಗಳು, ನಿಲ್ಲು ವುದಿಲ್ಲವೆಂದು ಬಾಯಲ್ಲಿ ಹೇಳುತ್ತಾ, ಮುಖ್ಯರಾದ ಮುಂದಾಳುಗಳೆಲ್ಲಾ ಕೇವಲ ಸ್ವಾರ್ಥದ ದಾರಿಯನ್ನು ಹಿಡಿದರೆ ಹೇಗೆ? ಅವರು ಮುಂದಾಳು ಗಳಾಗಲು ನಮ್ಮಂತಹ ಏನೂ ಅರಿಯದ ತರುಣರ ಬಲದಿಂದಲೇ ಎನ್ನು ವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಯಾವ ಸಂಸ್ಥೆಯಲ್ಲಿ ನಿಸ್ವಾರ್ಥತೆ ಇರುತ್ತದೆಯೋ ಅದು ಬದುಕುತ್ತದೆಯೇ ವಿನಹ ಸ್ವಾರ್ಥಿಗಳ ಸಂಸ್ಥೆ ಬದುಕುತ್ತಿದ್ದರೂ ಜೀವವಿಲ್ಲದಂತೆ ಎನ್ನಬಹುದು. ನಿಮ್ಮ ಸಂಸ್ಥೆ, ಕಾರ್ಯ ಕಲಾಪಗಳಲ್ಲಿ ಇನ್ನು ನಾನು ಭಾಗ ವಹಿಸಲು ಎಂದೆಂದಿಗೂ ಮನಸ್ಸು ಬರು ವುದಿಲ್ಲ. ನೀವು ನನಗೆ ಸಹಾಯ ಮಾಡುವುದಾಗಿ ತಿಳಿಸಿದ ಮಾತಿಗೆ ನಾನು ಚಿರ ಋಣಿ. ಆದರೆ ನಿಮ್ಮ ಬಾಯಿಂದ ಆ ಮಾತು ಬರಬಾರದಾಗಿತ್ತು— ನೀವು ಈಗ ಈ ಸಂಸ್ಥೆಯ ದ್ವೇಷಿಗಳು. ಅಂದಮೇಲೆ ನೀವು ನನಗೆ ಸಹಾಯ ಮಾಡಿದರೆ ಉಪ್ಪುತಿಂದ ಮನೆಗೆ ಎರಡು ಬಗೆದಂತೆ ಆಗುವುದಿಲ್ಲವೇ, ಯೋಚಿಸಿ ನೋಡಿ" ಎಂದು ಉದ್ವೇಗದಿಂದ ಮಾತುಗಳ ಸುರಿಮಳೆಯನ್ನು ಕರೆಯಲು, ಸಹಸ್ರಾರು ಜನರು ನೆರೆದಿದ್ದ ಸಭೆಯಲ್ಲಿ ನಿರರ್ಗಳವಾದ ವಾಕ್ ಪ್ರವಾಹವನ್ನು ಹರಿಸುವ ಶಕ್ತಿಯುಳ್ಳ ಶರಣಪ್ಪನವರ ಮುಖದಲ್ಲಿ ಬೆವರು ಹನಿ ಮೂಡಿತು. ಶಾಮುನ ಮಾತಿಗೆ ಉತ್ತರ ಹೇಳಲೂ ಅವರಿಗೆ ತೋಚಲಿಲ್ಲ. ಆದರೆ ಶಾಮುನು ಯಾವ ಉತ್ತರವನ್ನೂ ನಿರೀಕ್ಷಿಸದೆ, ಅವರಿಗೆ ವಂದಿಸಿ, ಮೂರ್ತಿಯೊಡನೆ ತಕ್ಷಣ ಅವರ ಮನೆಯಿಂದ ಹೊರಗೆ ನಡೆದ.

ಆ ರಾತ್ರಿ ಹಾಸಿಗೆಯ ಮೇಲೆ ಮಲಗಿರುವಾಗ ಶಾಮುನಿಗೆ ಕಿಟ್ಟುವು ಹೇಳಿದ ಮಾತುಗಳೆಲ್ಲಾ ಒಂದೊಂದಾಗಿ ಜ್ಞಾಪಕಕ್ಕೆ ಬಂದಿತು. ಸ್ವಲ್ಪ ಹೊತ್ತು ತನ್ನ ಮನಸ್ಸಿನಲ್ಲಿಯೇ ಚರ್ಚೆಮಾಡುತ್ತಾ, ಕೊನೆಗೆ ಕಿಟ್ಟುವಿನ ವಾಕ್ಯಗಳೇ ಸರಿಯೆಂಬ ತೀರ್ಮಾನಕ್ಕೆ ಬಂದ—ತನ್ನ ಅಲ್ಪ ಅನುಭವದಲ್ಲಿ ಪ್ರಪಂಚದ ವ್ಯವಹಾರಗಳೂ, ಆಗುಹೋಗುಗಳೂ, ಜನರ ಹೃದಯ, ನಡೆವಳಿಕೆ ಇವು ಗಳಿಗಿರುವ ಭೇದವೂ ಚೆನ್ನಾಗಿ ತಿಳಿಯಿತು. ಬೆಳಗ್ಗೆ ಆದೊಡನೆ ತನ್ನ ಅನು ಭವಗಳನ್ನು ಕುರಿತು, ಕಿಟ್ಟುವಿಗೆ ದೀರ್ಘವಾದ ಕಾಗದವೊಂದನ್ನು ಬರೆದು, ಅದರಲ್ಲಿ ತನ್ನದೇ ತಪ್ಪೆಂದು ಒಪ್ಪಿಕೊಂಡ. ಮಧ್ಯಾಹ್ನ ಊರೊಳಗೆ ಸುತ್ತಾ ಡುತ್ತಿರುವಾಗ, ತನ್ನಂತೆಯೇ ಕೆಲಸಕ್ಕೆ ತಿಲಾಂಜಲಿಯನ್ನಿತ್ತಿದ್ದ ಮೂರ್ತಿಯು

ಭೇಟಿಯಾದ. ಮೂರ್ತಿಗೂ ಹೆಚ್ಚು ಕಮ್ಮಿ ಶಾಮನಷ್ಟೇ ವಯಸ್ಸು. ಅವನೂ ಸ್ವಲ್ಪಮಟ್ಟಿಗೆ ಓದಿ, ವಿದ್ಯಾರ್ಥಿ ದೆಸೆಯಲ್ಲೇ ಚಳುವಳಿಗಳಲ್ಲಿ ಭಾಗ ವಹಿಸಿ ದೇಶಪ್ರೇಮಿಗಳೊಡನೆ ಅನೇಕ ಊರುಗಳನ್ನು ಸುತ್ತಿದ್ದ. ಆದರೆ ಮೂರ್ತಿಯು ಶಾಮನಂತೆ ಸುಮ್ಮನೆ ಕೂಡುವ ಸ್ಥಿತಿಯಲ್ಲಿರಲಿಲ್ಲ. ಅವನನ್ನೇ ನಂಬಿದ್ದ ತಂದೆತಾಯಿಗೆ ದುಡಿದು ತಂದುಹಾಕಬೇಕಿತ್ತು. ಆದ್ದರಿಂದ ಕೆಲಸವನ್ನು ಹುಡುಕುತ್ತಾ ಹೊರಟಿದ್ದಾಗಲೇ ಶಾಮನು ಎದುರಿಗೆ ಸಿಕ್ಕಿದ್ದು. ಮೂರ್ತಿಯು ಅನೇಕಸಾರಿ ಕಾರಾಗೃಹವಾಸವನ್ನು ಅನುಭವಿಸಿದ್ದುದರಿಂದ ಅವನಿಗೆ ಯಾವ ಸರ್ಕಾರಿ ನೌಕರಿಯೂ ಸಿಗುವಂತಿರಲಿಲ್ಲ. ದೇಶಕ್ಕಾಗಿ ದುಡಿಯಬೇಕು, ಚಳು ವಳಿಗಳಲ್ಲಿ ಭಾಗ ವಹಿಸಬೇಕು, ತನು ಮನ ಧನವನ್ನಾದರೂ ತ್ಯಜಿಸಿ ಸಂಸ್ಥೆಗೆ ಹಣಗಾಡಬೇಕು ಎಂದು ಪ್ರೋತ್ಸಾಹಕರವಾದ ಭಾಷಣಗಳನ್ನು ತರುಣರ ಹೃದಯದಮೇಲೆ ಪರಿಣಾಮವಾಗುವಂತೆ ಮಾಡಿ, ಅವರನ್ನು ಆ ದಾರಿಗೆ ಎಳೆದ ಮುಂದಾಳುಗಳೊಬ್ಬರೂ ಹೇಗೆ ಜೀವನ ನಡೆಸಬೇಕೆಂಬ ವಿಷಯ ವನ್ನು ತಿಳಿಸಿರಲಿಲ್ಲ—ಆ ವಿಷಯದಲ್ಲಿ ಅವರು ನಿಸ್ಸಹಾಯಕರಾಗಿದ್ದರು. ಆದ್ದ ರಿಂದ ಮೂರ್ತಿಯ ಜೀವನ ಬಹು ಕಷ್ಟತರವಾಗಿತ್ತು. ಅವನ ಮನೆಯ ಪಕ್ಕ ದಲ್ಲಿದ್ದ ಮಹನೀಯರೊಬ್ಬರು ಮೂರ್ತಿಯ ಸ್ಥಿತಿ ಗತಿಗಳನ್ನೂ, ಮನಸ್ಸು ಹೃದಯವನ್ನೂ ಅರಿತಿದ್ದುದರಿಂದ, ಒಂದು ಶಿಫಾರಸು ಕಾಗದವನ್ನು ಅವನಿಗೆ ಬರೆದುಕೊಟ್ಟು, ದಾನವೀರ ರಾಮರಾಯರ ಬಳಿಗೆ ಕೆಲಸಕ್ಕಾಗಿ ಕಳುಹಿ ಸಿದ್ದರು. ಆ ಪತ್ರದೊಡನೇ ಮೂರ್ತಿ ಆಗ ಹೋಗುತ್ತಿದ್ದುದು. ಎದುರಿಗೆ ಸಿಕ್ಕ ಶಾಮನಿಗೆ ವಿಷಯಗಳೆಲ್ಲವನ್ನೂ ಹೇಳಿ, ದಾನವೀರ ರಾಮರಾಯರಲ್ಲಿಗೆ ಹೋಗಿಬರುವುದಾಗಿ ತಿಳಿಸಿದ. ಶಾಮನೂ ಇನ್ನೂ ತನ್ನ ಮುಂದಿನ ಮಾರ್ಗ ವನ್ನು ನಿರ್ಧರಿಸಿರಲಿಲ್ಲ. ಯೋಚಿಸುತ್ತಾ ನಿಂತಿದ್ದ ಶಾಮನನ್ನು ಕುರಿತು, "ನೀನೂ ಬಾರಯ್ಯ, ಹೋಗಿಬರೋಣ" ಎಂದು ಮೂರ್ತಿಯು ಕರೆದೊಡನೆ, ಶಾಮನೂ ಮೂರ್ತಿಯೂ ಬಸವನಗುಡಿಯ ಮಾರ್ಗವಾಗಿ ಹೊರಟರು.

೫

ದಾನವೀರ ರಾಮರಾಯರ ಹೆಸರು ಯಾರಿಗೆ ಗೊತ್ತಿಲ್ಲ! ನಾಲ್ಕೈದು ಸಾರಿ ಐದಾರು ಅಂಕಿಗಳ ಹಣವನ್ನು ಅವರು ದಾನವಾಗಿ ಅನೇಕ ಸಾರ್ವ

ಜನಿಕ ಕೆಲಸಗಳಿಗೆ ಕೊಟ್ಟಿದ್ದರು. ಅವರು ಹಣಕೊಟ್ಟ ಸಂಸ್ಥೆಗಳ ಪ್ರಾರಂಭೋತ್ಸವ, ಶಂಖುಸ್ಥಾಪನೆ, ಮೊದಲಾದ ಕಾರ್ಯಗಳೆಲ್ಲಾ ಶುದ್ಧ ಅಮೃತಹಸ್ತಗಳಿಂದಲೇ ನೆರವೇರಿಸಲ್ಪಟ್ಟಿತ್ತು. ಅವರ ದಾನಕಾರ್ಯಗಳು ಅತಿಶಯವಾದ ಮೇಲೆಯೇ ಅವರಿಗೆ 'ದಾನವೀರ' ಎಂಬ ಬಿರುದು ಸಿಕ್ಕಿದ್ದು. ಸ್ವಂತವಾಗಿ ರಾಮರಾಯರು ಯಾವುದೋ ವ್ಯಾಪಾರವನ್ನು ಸಹಾ ಮಾಡುತ್ತಿದ್ದರು. ಅದರಿಂದ ಲಕ್ಷಾಂತರ ರೂಪಾಯಿಗಳನ್ನು ದುಡಿಯುತ್ತಿದ್ದಾರೆನ್ನುವುದು ಜನರಿಗೆಲ್ಲಾ ತಿಳಿದ ವಿಷಯವೇ ಹೌದು.

ತಮ್ಮ ವ್ಯಾಪಾರ ಸಂಸ್ಥೆಗಳಲ್ಲಿನ ಲೆಖ್ಖಪತ್ರಗಳಿಗಾಗಿ ರಾಮರಾಯರು ಅನೇಕ ಗುಮಾಸ್ತರನ್ನೂ, ಶಿಬ್ಬಂದಿಯನ್ನೂ ನೇಮಿಸಿದ್ದರು. ರಾಮರಾಯರು ಒಂದು ದಿನವಾಗಲೀ ಕಷ್ಟಪಡದಿದ್ದರೂ, ಪ್ರತಿನಿಮಿಷವೂ ಅವರ ಐಶ್ವರ್ಯವು ಹೆಚ್ಚುತ್ತಲೇ ಇತ್ತು. ಮೂರ್ತಿ, ಶಾಮ ರಾಯರ ಮನೆಗೆ ಹೋದಾಗ ಅವರು ಆಗತಾನೆ ಊಟಮಾಡಿ ಕಾರಖೂನನು ತಂದಿದ್ದ ಕೆಲವು ಕಾಗದಗಳಿಗೆ ಸಹಿ ಮಾಡುತ್ತಾ ಕುಳಿತಿದ್ದರು. ಬಾಗಿಲಿನಲ್ಲಿಯೇ ಶಾಮನು ನಿಂತು ಮೂರ್ತಿಯನ್ನು ತನ್ನ ಅದೃಷ್ಟ ಪರೀಕ್ಷಿಸುವಂತೆ ಹೇಳಿ ಒಳಗೆ ಕಳುಹಿಸಿದ. ಮೂರ್ತಿಯು ಪ್ರವೇಶಿಸಿ ದೂರದಿಂದಲೇ ರಾಯರಿಗೆ ನಮಸ್ಕರಿಸಿದೊಡನೆ, ಅವರ ಬಳಿ ನಿಂತಿದ್ದ ಗುಮಾಸ್ತನು ತನ್ನ ಕಾರ್ಯವು ಮುಗಿದುದರಿಂದ ಹೊರಗೆ ಬಂದುದನ್ನು ನೋಡಿ, ಶಾಮನೇ ಅವನನ್ನು ಮೊದಲು ಮಾತಾಡಿಸಿ, ರಾಯರ ವಿಷಯವನ್ನು ಕೇಳಿದ. ಆ ಗುಮಾಸ್ತನಿಗೆ ರಾಯರ ಬಳಿ ೧೫ ವರ್ಷದ ಅನುಭವವಿತ್ತು. ಆದರೂ ಸಂಬಳ ಮಾತ್ರ ೩೦ ರೂಪಾಯಿ. ಹರಕು ಬಟ್ಟೆಗಳನ್ನು ಧರಿಸಿ, ಮುಖದಲ್ಲಿ ಕಷ್ಟವನ್ನು ಹೊರಸೂಸುತ್ತಿದ್ದ ಆ ಗುಮಾಸ್ತನನ್ನು ನೋಡಿ ಶಾಮನಿಗೆ ಮರುಕವುಂಟಾಯಿತು. "ರಾಯರ ವ್ಯಾಪಾರ ಹೇಗಿದೆ" ಎಂದು ಪ್ರಶ್ನಿಸಿದ. ವಿಶ್ವಾಸದಿಂದ ಮಾತಾಡಿಸಿದ ಶಾಮನಮೇಲೆ ಅವನಿಗೆ ಅಭಿಮಾನವುಂಟಾಯಿತೋ ಏನೋ, ಈಗ ೧೦ ವರ್ಷದ ಹಿಂದೆ ರಾಯರು ಇದ್ದ ಸ್ಥಿತಿ, ಅವರು ಊಟ ತಿಂಡಿಗೆ ಪಡುತ್ತಿದ್ದ ಕಷ್ಟ, ನಂತರ ಸರ್ಕಾರದಲ್ಲಿನ ಒಬ್ಬಿಬ್ಬ ಉನ್ನತ ಅಧಿಕಾರಿಗಳ ಸಹಾಯದಿಂದ ಕಂಡುಹಿಡಿದ ಮಾರ್ಗ, ಮತ್ತು ಈಗ ಬರುತ್ತಿರುವ ಲಾಭ, ಅವರು ಮಾಡುತ್ತಿರುವ ದಾನಗಳಲ್ಲಿನ ಮರ್ಮ, ಎಲ್ಲವನ್ನೂ ಸುಮಾರು ಅರ್ಧ ಘಂಟೆಯ ಕಾಲ ತಿಳಿಸಿದ.

ಮೂರ್ತಿಯೂ ಕೆಲಸಕ್ಕಾಗಿ ಒಳಗೆ ಹೋಗಿರುವನೆಂದು ತಿಳಿದವೇಲಂತೂ, ಆ ಮನುಷ್ಯನು "ಖಂಡಿತಾ ಬೇಡಿ, ರಾಯರ ಹತ್ತಿರ ಕೆಲಸಮಾಡುವುದರ ಬದಲು, ಕೂಲಿ ಉತ್ತಮ. ದಯ, ಕನಿಕರ, ಒಂದನ್ನೂ ಕಾಣರು ಅವರು" ಎಂದು ತನ್ನ ಅಭಿಪ್ರಾಯವನ್ನು ಹೊರಗೆಡಹಿದ ಅಷ್ಟುಹೊತ್ತಿಗೆ ಮೂರ್ತಿಯು ಸಪ್ಪೆಮುಖದಿಂದ ಹೊರಗೆ ಬಂದುದನ್ನು ಕಂಡು, ಶಾಮನು ಗುಮಾಸ್ತನಿಗೆ ನಮಸ್ಕರಿಸಿ, ಮೂರ್ತಿಯೊಡನೆ ನಡೆಯುತ್ತಾ "ಏನಪ್ಪಾ ಸಮಾಚಾರ" ಎಂದು ಕೇಳಿದೊಡನೆ, "೧೫ ರೂಪಾಯಿ ಬೇಕಾದ್ರೆ ತಿಂಗಳಿಗೆ ಕೊಡ್ತೀನಿ, ದಿನಕ್ಕೆ ೯ ಘಂಟೆ ಕೆಲಸ" ಎಂದು ಅವರು ಹೇಳಿದ ಮಾತನ್ನು ಮೂರ್ತಿ ನಗುತ್ತಾ ತಿಳಿಸಿದ. ಶಾಮನಿಗೆ ಗುಮಾಸ್ತನಿಂದ ಮೊದಲೇ ವಿಷಯ ತಿಳಿದಿತ್ತು. "ಹೋಗಲಿ, ಬೇರೆ ಎಲ್ಲಾದರೂ ನೋಡು" ಎಂದು ಸೂಚಿಸಿದ.

ಮೂರು ದಿನಗಳ ನಂತರ ಶಾಮನ ಪತ್ರಕ್ಕೆ ಉತ್ತರವಾಗಿ ಕಿಟ್ಟುವಿನಿಂದ ಮದರಾಸಿಗೆ ಕೂಡಲೇ ಬರಬೇಕೆಂದು ಒತ್ತಾಯಪಡಿಸಲ್ಪಟ್ಟ ಕಾಗದವು ಬಂದಿತು. ತಪ್ಪದೇ ಬರಬೇಕೆಂದು ಕಿಟ್ಟುವು ಅನೇಕ ವಿಧದಲ್ಲಿ ಶಾಮನನ್ನು ಕೇಳಿಕೊಂಡು, ಯಾವುದೋ ಒಂದು ಸಂತೋಷ ಸಮಾರಂಭವು ತಮ್ಮ ಮನೆಯಲ್ಲಿ ಜರುಗುವುದೆಂದೂ, ಅದಕ್ಕೆ ಖಂಡಿತ ಶಾಮನು ಬಂದೇತೀರಬೇಕೆಂದೂ ಪ್ರಾರ್ಥಿಸಿದ್ದ. ಇಷ್ಟೇ ಅಲ್ಲದೆ ಶಾಮನ ರೈಲು ವೆಚ್ಚಕ್ಕಾಗಿ ೨೫ ರೂಪಾಯಿನ ಚೆಕ್ಕೊಂದು ಸಹಾ ಕಾಗದದೊಡನೆ ಇಡಲ್ಪಟ್ಟಿತ್ತು. ಕಿಟ್ಟುವಿನ ಸ್ನೇಹ ವಿಶ್ವಾಸ ಎಷ್ಟು ಹೆಚ್ಚಿನ ಮಟ್ಟದ್ದು ಎನ್ನುವುದು ಶಾಮನಿಗೆ ತಿಳಿದೇ ಇತ್ತು. ಬೇರೆ ಯಾವ ಕೆಲಸವೂ ಇಲ್ಲದುದರಿಂದ, ಕೇವಲ ಐದಾರು ತಿಂಗಳು ಮಾತ್ರ ಬೆಂಗಳೂರಿನಲ್ಲಿ ಕಳೆದು, ಈ ಮಧ್ಯೆ ಜ್ಞಾನವನ್ನೂ ಪ್ರಪಂಚದ ರೀತಿಯನ್ನೂ ಸ್ವಲ್ಪಮಟ್ಟಿಗೆ ಕರಗತಮಾಡಿಕೊಂಡು ಪುನಃ ಮದರಾಸಿಗೆ ರೈಲನ್ನು ಹತ್ತಿದ.

# ಮೂರನೆಯ ಭಾಗ

## ೧

ಈ ಮಧ್ಯೆ ತಮ್ಮಯ್ಯನವರ ಮನೆಯ ಸ್ಥಿತಿಯು ಅನೇಕ ರೀತಿಯಲ್ಲಿ ಬದಲಾವಣೆಯಾಯಿತು. ಶಾಮನು ಮನೆ ಬಿಟ್ಟುಹೋದ ಒಂದು ವಾರ ದಲ್ಲಿಯೇ ಮಂಗಳೂರಿನಿಂದ ಕಾಗದ ಬಂದುದರಿಂದ ತಮ್ಮಯ್ಯನವರು ಸೀತಮ್ಮ, ಕಮಲಳೊಂದಿಗೆ ತಮ್ಮ ಸ್ವಂತ ಮನೆಗೆ ಹಿಂದಿರುಗಿದರು. ಶಾಮನು ಎಷ್ಟು ಶ್ರಮವಹಿಸಿ ಕೆಲಸಮಾಡುತ್ತಿದ್ದನೆಂಬುದು ಅವನಿಲ್ಲದಿರುವುದರಿಂದ ತಮ್ಮಯ್ಯ ನವರಿಗೆ ಚೆನ್ನಾಗಿ ಅರ್ಥವಾಯಿತು. ಶಾಮ, ರಾಮು ಇಬ್ಬರೂ ಇಲ್ಲದಿರು ವುದು ಸೀತಮ್ಮನವರಿಗೆ ಬಹಳ ಸಮಾಧಾನವಾಯಿತು. ತಮ್ಮ ಆಕಾಂಕ್ಷೆ ಯನ್ನು ಆದಷ್ಟು ಜಾಗ್ರತೆ ನೆರವೇರಿಸಿಕೊಳ್ಳಬೇಕೆಂದು ಪ್ರಯತ್ನಿಸಲು ಆರಂಭಿ ಸಿದರು. ಮಂಗಳೂರಿಗೆ ಬಂದ ಮೂರನೆ ದಿನವೇ ಅವರಿಂದ ಪುನಃ ರಘುವಿಗೆ ಪತ್ರ ಹೋಯಿತು. ಪ್ರತಿ ನಿಮಿಷವೂ ರಘುವಿನಲ್ಲಿ ಪ್ರೇಮ ಉಂಟಾಗುವಂತೆ ಮಾಡಲು, ಸೀತಮ್ಮನವರು ಮೃದುಮಾತುಗಳಿಂದ, ನಯದಿಂದ ಸನ್ನಿವೇಶ ಗಳನ್ನು ಕಲ್ಪಿಸಿಕೊಂಡು, ಕಮಲಳಿಗೆ ಬೋಧಿಸಲಾರಂಭಿಸಿದರು. ಸೀತಮ್ಮ ನವರು ಎಷ್ಟೇ ಹೇಳಲಿ, ಕಮಲಳಿಗೆ ರಘುವಿನಮೇಲೆ ವಿಶ್ವಾಸ ಹುಟ್ಟಲಿಲ್ಲ. ಶಾಮನ ವರ್ತನೆಯಲ್ಲಿ ಅವಳಿಗೆ ತಪ್ಪು ಕಂಡು ಕೋಪ ಬಂದಿದ್ದರೂ, ಸೀತಮ್ಮ ನವರು ತನ್ನ ಮದುವೆಯ ವಿಷಯವನ್ನು ಪ್ರಸ್ತಾಪಿಸಿದಾಗಲೆಲ್ಲಾ ಬೇಸರ ವಾಗುತ್ತಿತ್ತು—ಹಾಗೂ ಶಾಮನ ನೆನಪು ಪ್ರಯತ್ನವಿಲ್ಲದೇನೇ ಮನಸ್ಸಿನಲ್ಲಿ ಬರುತ್ತಿತ್ತು. ಕಮಲಳಿಗೆ ಬೇಸರವಾದರೂ ಸೀತಮ್ಮನವರು ವಿರಾಮವಾದಾಗ ಲೆಲ್ಲಾ ಅವಳ ಮುಂದೆ ಶಾಮನನ್ನು ದೂರುವುದೂ, ಹೀಯಾಳಿಸುವುದೂ, ಜತೆಗೆ ರಘುವಿನ ಗುಣಗಾನ ಮಾಡುವುದೂ ಪದ್ಧತಿಯಾಗಿಟ್ಟುಕೊಂಡರು. ಅವರ ಮಾತುಗಳನ್ನು ಮೂರು ಹೊತ್ತೂ ಕೇಳಿ ಕೇಳಿ ಕಮಲಳಿಗೆ ಪ್ರಪಂಚವೇ ಬೇಡವೆನ್ನುವಷ್ಟು ಜಿಗುಪ್ಸೆಯಾಗಿತ್ತು. ರಾಮುವಿನಿಂದ ಆಗಾಗ ಕಾಗದಗಳು ಬಂದರೂ, ಕಮಲಳು ಶಾಮನ ವಿಷಯವನ್ನೂ, ಅವನು ಮನೆ ಬಿಟ್ಟು ಹೋದುದನ್ನೂ ತಿಳಿಸಿರಲಿಲ್ಲ. ರಾಮುವು ಮಾತ್ರ ಪ್ರತಿಯೊಂದು ಕಾಗದ

ದಲ್ಲಿಯೂ ಶಾಮನ ಆರೋಗ್ಯ, ಕೆಲಸದ ದಕ್ಷತೆ ಇವುಗಳನ್ನು ಪ್ರಶ್ನಿಸಿ ಬರೆಯುತ್ತಿದ್ದ.

ಒಂದೊಂದು ಬಾರಿ ಕಮಲಳು ಸೀತಮ್ಮನವರು ಹೇಳಿದಂತೆ ಕೇವಲ ಒಬ್ಬ ಗುಮಾಸ್ತನೊಡನೆ ತಾನು ಸಲಿಗೆಯಿಂದ ಮಾತಾಡುತ್ತಿದ್ದುದು, ಕೊನೆಗೆ ಮನಸ್ಸಿನಲ್ಲಿಯೇ ಪ್ರೇಮಿಸಿದ್ದುದು ಸರಿಯಲ್ಲವೆಂದು ಆಲೋಚಿಸುವಳು— ತನ್ನ ವಂಶವೇನು, ಅಂತಸ್ಥೇನು— ಶಾಮನೆಲ್ಲಿ, ಎನ್ನುವ ಮೇಲು ಕೀಳು ಭಾವನೆಯೂ ಆಕೆಯಲ್ಲಿ ತಲೆದೋರುವಂತೆ ಸೀತಮ್ಮನವರು ವಿಷಬೀಜವನ್ನು ಬಿತ್ತಿದ್ದರು. ತಮ್ಮಯ್ಯನವರು ಊರಿಗೆ ಹಿಂದಿರುಗಿದ ವಿಷಯವನ್ನು ಸೀತಮ್ಮನವರ ಪತ್ರ ದಿಂದ ತಿಳಿದ ರಘುವು ಎರಡು ಮೂರು ದಿನಗಳಲ್ಲಿಯೇ ಮಂಗಳೂರಿಗೆ ಬಂದು ಇಳಿದ. ಸೀತಮ್ಮನವರಿಗೆ ರಘುವಿನ ಆಗಮನದಿಂದ ಸಂತಸವಾದರೂ ಕಮಲ ಳಿಗೆ ಮನೋವ್ಯಥೆಯು ಆವರಿಸಿತು. ರಘುವು ಈ ಸಾರಿ ಬಂದುದು ತನ್ನ ಅಕ್ಕ ಬರೆದ ಪತ್ರದ ಅಭಿಪ್ರಾಯದಂತೆಯಾದರೂ ಆಕೆಯಿಂದ ಆಗತ್ಯವಾದ ಕೆಲಸವೊಂದು ಆಗಬೇಕಿತ್ತು. ರಘುವಿನ ಮುಖವನ್ನು ನೋಡಿದ ಸೀತಮ್ಮ ನವರಿಗೆ ತಮ್ಮ ಅಚ್ಚುಮೆಚ್ಚಿನ ಹುಡುಗ ಯಾವುದೋ ಕೊರಗಿನಲ್ಲಿ ಸಿಕ್ಕಿರುವ ನೆಂದು ತಿಳಿಯದೇ ಹೋಗಲಿಲ್ಲ. ತಮ್ಮಯ್ಯನವರು ಮನೆಯಲ್ಲಿಲ್ಲದ ವೇಳೆ ಯನ್ನು ನೋಡಿ ರಘುವು ತನ್ನ ಕಷ್ಟವನ್ನು ಹೇಳಿಕೊಂಡು ಕೂಡಲೇ ಒಂದು ಸಾವಿರ ರೂಪಾಯಿ ಬೇಕೆಂದೂ, ಇಲ್ಲದಿದ್ದರೆ ಮಾನ ಹೋಗುತ್ತದೆ ಎಂದೂ ಅಕ್ಕನಿಗೆ ತಿಳಿಸಿದ. ಸೀತಮ್ಮನವರಿಗೆ ತಮ್ಮನಮೇಲೆ ಪ್ರೀತಿಯಿದ್ದರೂ ಅವನು ಆಡಿದ ಮಾತುಗಳು ಆಶ್ಚರ್ಯವನ್ನುಂಟುಮಾಡಿತು. ಕಮಲಳನ್ನು ಕೊಟ್ಟು ವಿವಾಹ ಮಾಡಬೇಕೆಂಬ ಸಾಹಸದಲ್ಲಿ ಅವರು ಒದ್ದಾಡುತ್ತಿರುವಾಗ ರಘುವು ಹೀಗೆ ಹಣವನ್ನು ಪೋಲುಮಾಡುವುದು ಎಳ್ಳಷ್ಟೂ ಅವರ ಮನಸ್ಸಿಗೆ ಒಪ್ಪಲಿಲ್ಲ. ಆದರೂ ತನ್ನ ಆಗಿನ ಸ್ಥಿತಿಯನ್ನು ಮನಕರಗುವಂತೆ ಹೇಳಿ, ಹಣವಿಲ್ಲದಿದ್ದರೆ ತುಂಬಾ ತೊಂದರೆಯಾಗುತ್ತದೆಯೆಂದು ಬೇಡಿದಮೇಲೆ, ಸೀತಮ್ಮನವರಿಗೂ ಕಷ್ಟದಿಂದ ರಘುವನ್ನು ಪಾರುಮಾಡಲೇಬೇಕನ್ನಿಸಿತು. ಹಣ ಎತಕ್ಕೆ, ಯಾರಿಗೆ ಕೊಡಬೇಕು, ಅಂತಹ ಅವಶ್ಯಕವೇನು ಎಂದು ಅವರು ಕೇಳಿದ ಪ್ರಶ್ನೆಗಳಿಗೆ ರಘುವು ಸಮರ್ಪಕವಾದ ಉತ್ತರವನ್ನು ಕೊಡಲಿಲ್ಲ. ಮೂರು ದಿನಗಳ ಮೇಲೆ ಸೀತಮ್ಮನವರು ಹಣವನ್ನು ರಘುವಿನ ಕೈಗೆ

ಒಪ್ಪಿಸಿದರು. ರಘುವಿಗೆ ಆ ಸಮಯದಲ್ಲಿ ಮುಖ್ಯವಾಗಿ ಬೇಕಾಗಿದ್ದುದು ಹಣ—ಅದು ಸಿಕ್ಕಿದಮೇಲೆ ಕಮಲಳನ್ನು ಮರೆತು ತನ್ನ ಹಳ್ಳಿಯ ಕಡೆ ಧಾವಿಸಿದ.

ಸೀತಮ್ಮನವರು ತಮ್ಮ ಪೆಟ್ಟಿಗೆಯಿಂದ ಸಾವಿರ ರೂಪಾಯಿ ತೆಗೆದು ಕೊಂಡ ಸಮಾಚಾರ ತಮ್ಮಯ್ಯನವರಿಗೆ ತಿಳಿಯದೇ ಹೋಗಲಿಲ್ಲ. ಅವರು ಪ್ರಶ್ನಿಸುತ್ತಲೇ "ಕಮಲಳ ವಿವಾಹದ ಸಿದ್ಧತೆಗಾಗಿ ತೆಗೆದುಕೊಂಡಿದ್ದೇನೆ" ಎಂದು ಉತ್ತರಕೊಟ್ಟರು. "ನನಗೆ ಕೇಳಬಾರದಾಗಿತ್ತೇ. ನನಗೆ ತಿಳಿಸ ದೇನೇ ಮದುವೆ ಮಾಡಿಬಿಡುತ್ತೀಯಾ" ಎಂದು ನಗುತ್ತಾ ತಮ್ಮಯ್ಯನವರು ಪ್ರಶ್ನಿಸಿದರು. "ಹುಡುಗಿಗೆ ೧೬ ವರ್ಷ ತುಂಬಿತು. ಬೇಗ ವಿವಾಹ ಮಾಡೋಣ ಎಂದು ಎಷ್ಟು ಬಾರಿ ಹೇಳಿದರೂ ನೀವು ಕಿವಿಮೇಲೆ ಹಾಕಿ ಕೊಂಡಿಲ್ಲ—ಕಮಲಳಿಗೂ ಪಾಪ ಅದೇ ಕೊರಗು—ಆದ್ದರಿಂದ ಈಗಿನಿಂದಲೇ ಸಿದ್ಧತೆ ಮಾಡಿಕೊಳ್ಳೋಣವೆಂದು ಹಣ ತೆಗೆದುಕೊಂಡೆ. ನಿಮಗಿಷ್ಟವಿಲ್ಲ ದಿದ್ದರೆ ವಾಪಸ್ಸು ಕೊಡುತ್ತೇನೆ" ಎಂದು ಸೀತಮ್ಮನವರು ನಟಿಸಿದಮೇಲೆ "ವರ ಯಾರು, ಮದುವೆ ಯಾವಾಗ, ಎನ್ನುವುದೊಂದೂ ಗೊತ್ತಿಲ್ಲದೆ ಇರು ವಾಗ ಹಣಕ್ಕೇನು ಅವಸರ" ಎಂದರು ತಮ್ಮಯ್ಯನವರು. "ರಘುವಿಗೆ ಕೊಡೋಣವೆಂದು ಅನೇಕಸಲ ನಾನೇ ಹೇಳಿದ್ದೇನೆ. ಅವನೂ ಒಪ್ಪಿದ್ದಾನೆ. ಕಮಲಳಿಗೂ ಇಷ್ಟ. ದಾಂಪತ್ಯ ಚೆನ್ನಾಗಿರುತ್ತೆ. ಅದೂ ಅಲ್ಲದೆ ಹುಡುಗಿಯು ಬೇರೆ ಎಲ್ಲೋ ಹೋಗಿ ಕಷ್ಟಪಡುವ ಅವಶ್ಯಕವಿಲ್ಲ ಇದೆಲ್ಲಾ ತಿಳಿದಿದ್ದೂ ಪುನಃ ಕೇಳುತ್ತಿದ್ದೀರಲ್ಲಾ" ಎಂದು ಸೀತಮ್ಮನವರು ಆಶ್ಚರ್ಯವನ್ನು ವ್ಯಕ್ತ ಪಡಿಸಿದರು. "ಕಮಲಳನ್ನು ಕೇಳೋಣ" ಎಂದಿಷ್ಟೇ ಹೇಳಿ ತಮ್ಮಯ್ಯನವರು ಊಟಕ್ಕೆದ್ದರು. ಸೀತಮ್ಮನವರು ತಕ್ಷಣವೇ ಕಮಲಳ ಕೊಟಡಿಗೆ ಬಂದು "ಕಮಲೂ, ಕಮಲೂ, ಮದುವೇಗೆ ಏರ್ಪಾಡು ನಡೆಯಲಿ ಎಂದು ನಿನ್ನ ತಂದೆ ಯವರೂ ಹೇಳಿದರು. ರಘುವಿಗೆ ಕೊಡಲು ಅವರಿಗೆ ಯಾವ ಅಡ್ಡಿಯೂ ಇಲ್ಲ—ನಿನಗೂ ಸಮ್ಮತವೆಂದು ನಾನೇ ತಿಳಿಸಿದ್ದೇನೆ" ಎಂದರು. ಕಮಲಳಿಗೆ ಉತ್ತರ ಹೇಳಲು ತೋಚಲಿಲ್ಲ. ಆದರೆ ತನ್ನ ತಂದೆಯೂ ಈ ವಿವಾಹಕ್ಕೆ ಒಪ್ಪಿದ್ದಾರೆನ್ನುವುದು ತಿಳಿದು ಅವಳಿಗೆ ಸಂಕಟವಾಯಿತು. ತನ್ನ ಹೆತ್ತ ತಾಯಿಯು ಬದುಕಿದ್ದರೆ ಇಷ್ಟು ಅವ್ಯವಸ್ಥೆಯಾಗುತ್ತಿತ್ತೇ ಎಂದು ಮನಸ್ಸಿ

ನಲ್ಲಿ ಕೊರಗುತ್ತಾ "ನನಗಿಷ್ಟವಿಲ್ಲ" ಎಂದು ಎದುರಿಗೆ ಇನ್ನೂ ನಿಂತಿದ್ದ ಸೀತಮ್ಮನವರಿಗೆ ತಿಳಿಸಿದಳು. "ಮದುವೆಯಾಗುವವರಿವಿಗೂ ಹುಡುಗಿಯರು ಹೇಳುವುದೇ ಹಾಗೆ. ಅರಶಿನದ ನೀರು ಮೈಮೇಲೆ ಬೀಳಲಿ, ಆಮೇಲೆ ಗೊತ್ತಾಗುತ್ತೆ" ಎಂದು ಮುಗುಳ್ನಗೆಯನ್ನು ಸೂಸುತ್ತಾ ಸೀತಮ್ಮನವರು ಅಲ್ಲಿಂದ ಹೊರಟಮೇಲೆ, ಕಮಲಳಿಗೆ ಮುಂದೇನು ಮಾಡಬೇಕೆಂಬ ಯೋಚನೆಯು ಆವರಿಸಿತು. ತನ್ನ ತಂದೆಯೊಡನೆ ವಿಶದವಾಗಿ ತಿಳಿಸುವುದೇ ಸೂಕ್ತವೆಂದು ನಿರ್ಧರಿಸಿದಳು. ಆದರೆ ಕೆಲವು ದಿನ ಅವರೊಡನೆ ಮಾತಾಡಲು ಅವಕಾಶವೇ ಆಗಲಿಲ್ಲ—ಸೀತಮ್ಮನವರೆದುರು ಮಾತಾಡಿದರೂ ಪ್ರಯೋಜನವಿಲ್ಲವೆಂದು ಚೆನ್ನಾಗಿ ತಿಳಿದಿತ್ತು. ಕಮಲಳ ಮೌನವು ಸಮ್ಮತಿಯ ಕುರುಹೆಂದು ಸೀತಮ್ಮನವರು ಪದೇ ಪದೇ ತಮ್ಮಯ್ಯನವರಿಗೆ ಹೇಳಲಾರಂಭಿಸಿದರು. ವಿಷಯವೆಲ್ಲವನ್ನೂ ವಿಶದವಾಗಿ ಕಮಲಳು ತನ್ನ ಅಣ್ಣನಿಗೆ ಪತ್ರ ಬರೆದು ತಿಳಿಸಿದಳು. ಒಂದು ದಿನ ಸಮಯ ಸಿಕ್ಕಾಗ ತಂದೆಯೊಡನೆ "ಈ ಮದುವೆ ಸಮ್ಮತವಿಲ್ಲ" ಎಂದು ಧೈರ್ಯದಿಂದ ಹೇಳಿದುದನ್ನು ಕೇಳಿ ತಮ್ಮಯ್ಯನವರು "ಯಾಕೆ? ರಘುವನ್ನು ಮದುವೆಯಾಗಲು ಅಡ್ಡಿ ಏನು? ಕುಂಟೇ, ಕುರುಡೇ" ಎಂದು ಪ್ರಶ್ನಿಸುತ್ತಲೇ "ಹಾಗೇನೂ ಇಲ್ಲ ಆದರೆ, ನನಗಿಷ್ಟವಿಲ್ಲ" ಎಂದು ಉತ್ತರ ಕೊಟ್ಟಳು. "ಇನ್ನೆಷ್ಟು ವರ್ಷ ಹೀಗೇ ಇರಲು ಸಾಧ್ಯ. ನೋಡಿದವರು ನಗುವುದಿಲ್ಲವೇ? ಇಷ್ಟವಿಲ್ಲದುದಕ್ಕೂ ಕಾರಣ ಬೇಕಲ್ಲಾ" ಎಂದು ಸ್ವಾಭಾವಿಕವಾಗಿ ಮಗಳನ್ನು ಕೇಳಿದರು. ಕಮಲಳಿಗೆ ಏನು ಉತ್ತರ ಕೊಡಬೇಕೆನ್ನುವುದೇ ತೋಚಲಿಲ್ಲ. ಅವಳ ಮನಸ್ಸೇನೋ ರಘುವನ್ನು ವಿವಾಹವಾಗಬೇಡ ಎಂದು ಸಾರಿಸಾರಿ ಹೇಳುತ್ತಿತ್ತು. ಕಮಲಳು ಮಾತಾಡದೆ ಇರುವುದನ್ನು ನೋಡಿ ತಮ್ಮಯ್ಯನವರು "ರಘುವನ್ನು ಮದುವೆಯಾಗಲು ಇಷ್ಟವಿಲ್ಲದ್ದರೆ ಅದಕ್ಕೆ ಕಾರಣವೇನು ತಿಳಿಸಿದರೆ ನಂತರ ನೋಡೋಣ" ಎಂದು ಹೇಳಿ, ತಮ್ಮ ಕೆಲಸಕ್ಕಾಗಿ ಹೊರಟರು. ಸೀತಮ್ಮನವರ ಮಾತಿಗೆ ಮರುಳಾಗಿ ತನ್ನ ತಂದೆಯೂ ಈ ವಿಷಯದಲ್ಲಿ ಒಪ್ಪಿಗೆಯಿತ್ತಿರಬಹುದೆಂದು ಕಮಲಳು ಬಹಳವಾಗಿ ಕೊರಗಿದಳು. ಇಲ್ಲದಿದ್ದರೆ ರಘುವನ್ನು ವಿವಾಹವಾಗುವಂತೆ ಅವರಿಂದ ಯಾಕೆ ಸಲಹೆ ಬರುತ್ತಿತ್ತು? ಎನ್ನುವುದೇ ಅವಳ ಸಂದೇಹ. ಆದರೆ ತಮ್ಮಯ್ಯನವರು ಸಹಜವಾಗಿ ಮಗ

ಳನ್ನು ಪ್ರಶ್ನಿಸಿದ್ದರೆನ್ನುವುದು ಅವಳಿಗೆ ತಿಳಿಯಲಿಲ್ಲ. ಇದಾದ ಕೇವಲ ೧೫ ದಿನಗಳಲ್ಲಿಯೇ ಸೀತಮ್ಮನವರು ಚಟುವಟಿಕೆಯಿಂದ ಲಗ್ನಪತ್ರಿಕೆಯ ಶಾಸ್ತ್ರವನ್ನು ಮುಗಿಸಿದರು. ಮದುವೆಯ ಮುಹೂರ್ತವು ಒಂದು ತಿಂಗಳನಂತರ ಎಂದು ಜೋಯಿಸರಿಂದ ಗುಣಿಸಲ್ಪಟ್ಟಿತು. ರಾಮುವಿಗೆ ರಜಾ ಬಂದುದರಿಂದ ಲಗ್ನಪತ್ರಿಕೆ ಮುಗಿದ ಮೂರನೆಯ ದಿನವೇ ಮಂಗಳೂರಿಗೆ ಹಿಂದಿರುಗಿದ. ನಡೆದ ವಿಷಯವೆಲ್ಲವೂ ವಿಶದವಾಗಿ ಅವನಿಗೆ ತನ್ನ ತಂಗಿಯಿಂದ ತಿಳಿಯಿತು. "ಇಷ್ಟವಿಲ್ಲದಿದ್ದ ಮೇಲೆ ಖಂಡಿತ ಬೇಡವೆಂದು ಒತ್ತಿ ಹೇಳಬೇಕಾಗಿತ್ತು" ಎಂಬುದಾಗಿ ರಾಮುವು ಕಮಲಳಿಗೆ ಹೇಳಿದ. ಕಮಲಳು ಹಾಗೆ ತನ್ನ ಹೃದಯವನ್ನು ಮರೆಮಾಚದೆ ತಂದೆಯವರಿಗೆ ತಿಳಿಸಿದ್ದರೆ, ತಮ್ಮಯ್ಯನವರು ಮಗಳ ಮನಸ್ಸನ್ನು ನೋಯಿಸುತ್ತಿರಲಿಲ್ಲ ಕಮಲಳಿಗೆ ತನ್ನ ತಂದೆಯೂ ಸೀತಮ್ಮನವರಿಂದ ಬೋಧಿಸಲ್ಪಟ್ಟಿರಬೇಕೆಂಬ ಅನುಮಾನವು ಮನಸ್ಸಿನಲ್ಲಿ ಬೇರೂರಿದ್ದರಿಂದ ಅವಳು ಖಚಿತವಾಗಿ ವಿಷಯವನ್ನು ಹೇಳಲಾರದೆ ಹೋದಳು. ಹೀಗೆ ಅನುಮಾನವಾಗಿ ಮಾತಾಡುವುದು ಈ ವಿಷಯದಲ್ಲಿ ಹುಡುಗಿಯರಿಗೆ ಸಹಜವೆಂದು ಭಾವಿಸಿ ತಮ್ಮಯ್ಯನವರು ಸೀತಮ್ಮನವರ ಕೆಲಸಕಾರ್ಯಗಳಿಗೆ ಅಡ್ಡಿ ಮಾಡಿರಲಿಲ್ಲ ರಘುವಿನ ವಿಷಯವನ್ನು ಹೆಚ್ಚಾಗಿ ತಿಳಿದುಕೊಳ್ಳುವ ಸಂದರ್ಭವೇ ತಮ್ಮಯ್ಯನವರಿಗೆ ಬಂದಿರಲಿಲ್ಲ. ಮಗಳನ್ನು ಅವನಿಗೆ ವಿವಾಹ ಮಾಡಿದರೆ ತಮ್ಮ ಮನೆಯವರಿಗೇ ಕೊಟ್ಟಂತೆ ಆಗಿ ಬೇರೆ ಎಲ್ಲೂ ಹೋಗಬೇಕಾದ ಅಥವಾ ಕಷ್ಟಪಡಬೇಕಾದ ಸಮಯ ಬರುವುದಿಲ್ಲವಲ್ಲಾ ಎಂದೇ ಅವರು ಸೀತಮ್ಮನವರ ಮಾತಿಗೆ ಬದಲಾಡಿರಲಿಲ್ಲ. ರಾಮುವಿಗೂ ಈ ವಿಷಯದಲ್ಲಿ ತನ್ನ ತಂಗಿಯ ಅಭಿಪ್ರಾಯದಂತೆ ಮನಸ್ಸಿತ್ತು. ಅವನಿಗೆ ಮೊದಲಿನಿಂದಲೂ ರಘುವನ್ನು ಕಂಡರೆ ಜಿಗುಪ್ಸೆಯಾಗುತ್ತಿತ್ತು—ಅವನ ಷೋಕು, ಬೂಟಾಟಿಕೆ, ಜಂಬ ಒಂದೂ ಸರಿಬೀಳುತ್ತಿರಲಿಲ್ಲ.

ಕಮಲಳಿಂದ ಶಾಮುನ ವಿಷಯವೆಲ್ಲವನ್ನೂ ಕೇಳಿದಮೇಲಂತೂ ರಾಮುವಿಗೆ ತುಂಬಾ ಸಂಕಟವಾಯಿತು. ಶಾಮುನು ಹೊರಟುಹೋಗಲು ಕಾರಣವನ್ನು ಪ್ರಶ್ನಿಸಿ, ಕಮಲು ಹೇಳಿದ ಮತ್ತು ನೋಡಿದ್ದ ಸನ್ನಿವೇಶಗಳನ್ನು ಅರಿತುಕೊಂಡ. ರಾಮು, ಶಾಮು ಇಬ್ಬರು ಸ್ವಲ್ಪ ಕಾಲ ಮಾತ್ರ ಜತೆಯಲ್ಲಿದ್ದರೂ, ಶಾಮುನ ಹೃದಯವು ರಾಮುವಿಗೆ ಅರ್ಥವಾಗಿತ್ತು. ಒಬ್ಬರ ಹೃದ

ಯವು ಇನ್ನೊಬ್ಬರಿಗೆ ತಿಳಿದಮೇಲೆ, ಆ ಮನುಷ್ಯನ ನಡೆವಳಿಕೆ ಅನುಮಾನಾ ಸ್ಪದವಾದರೂ ಸತ್ಯವಲ್ಲ ಎನ್ನುವ ನಿರ್ಧಾರ ಬಹಳ ಬೇಗ ಬರುತ್ತದೆ. ಅಂತೆಯೇ ಶಾಮನ ವಿಷಯ ಕಮಲಳಿಂದ ಕೇಳಿದ ರಾಮುವು ತನ್ನ ತಂಗಿಯ ಅಲ್ಪಬುದ್ಧಿಗೆ ಪೇಚಾಡಿದ. ನೋಡಿದ ವಿಷಯಗಳನ್ನು ಅರ್ಥಮಾಡಿಕೊಂಡು, ಅದಕ್ಕೆ ಸೇರಿದ ಜನರೊಡನೆ ಮಾತಾಡಿ, ಯಾವುದು ನಿಜ, ಯಾವುದು ಸುಳ್ಳು ಎಂಬ ಅಭಿಪ್ರಾಯಕ್ಕೆ ಬರುವುದು ನ್ಯಾಯವೆಂದು ರಾಮುವು ವಾದಿಸಿದ. "ಎಷ್ಟಾದರೂ ಗುಮಾಸ್ತನಾಗಿದ್ದವನು" ಎಂದು ಕಮಲಳು ಹೇಳಿದ ಮೇಲಂತೂ, ರಾಮುವಿಗೆ ಆಕೆಯ ಮನಸ್ಸು ಆ ರೀತಿ ಬದಲಾಯಿಸುವಂತೆ ಸನ್ನಿವೇಶಗಳು ಸೃಜಿಸಲ್ಪಟ್ಟಿರಬೇಕೆಂದು ತೋರಿತು ಶಾಮನ ಹೃದಯ ವೈಶಾಲ್ಯವನ್ನೂ, ದೊಡ್ಡಮನಸ್ಸನ್ನೂ, ಆದರ್ಶ ಗುಣಗಳನ್ನೂ ರಾಮುವು ಕಮಲಳಿಗೆ ಅರ್ಥವಾಗುವಂತೆ ಹೇಳಿದ.

೨

ರಾಮುವು ಮಂಗಳೂರಿಗೆ ಬಂದ ಒಂದು ವಾರದನಂತರ ಯಾರೋ ಒಬ್ಬ ಅಪರಿಚಿತನು ಬಂದು "ರಘುನಾಥರಾಯರಿದ್ದಾರಾ" ಎಂದು ತಮ್ಮಯ್ಯನವರ ಮನೆಯಲ್ಲಿ ಕೇಳಿದ. ತಮ್ಮ ಮನೆಗೆ ಬಂದು ಕೇಳಲು ಕಾರಣವೇನು ಎನ್ನು ವುದು ರಾಮುವಿಗೆ ಕುತೂಹಲವನ್ನುಂಟುಮಾಡಿತು. "ಅವನು ಇನ್ನೂ ಈ ಊರಿಗೆ ಬಂದಿಲ್ಲ. ೭-೮ ದಿನಗಳಲ್ಲಿ ಬರಬಹುದು" ಎಂದು ಸೀತಮ್ಮನವರು ತಿಳಿಸಿ, "ಯಾರೋ ಅವನ ಸ್ನೇಹಿತರಿರಬಹುದು, ವಿಚಾರಿಸಬಾರದೇ" ಎಂಬು ದಾಗಿ ಅಲ್ಲಿಯೇ ನಿಂತಿದ್ದ ರಾಮುವಿಗೆ ಹೇಳಿದರು. ಬಂದ ಮನುಷ್ಯನು ಮತ್ತೇನನ್ನೂ ಮಾತಾಡದೆ ಸ್ವಲ್ಪ ದೂರ ನಿಧಾನವಾಗಿ ಹೆಜ್ಜೆಹಾಕಿ ನಂತರ ಹಿಂದಿರುಗಿ ನೋಡಿದ. ಬಾಗಿಲಿನಲ್ಲೇ ನಿಂತಿದ್ದ ರಾಮುವು ಬಹುಶಃ ಆತನು ತನ್ನನ್ನು ಕರೆದನೆಂದು ಭಾವಿಸಿ, ಅವನ ಹತ್ತಿರಕ್ಕೆ ಹೋಗಿ "ಯಾಕೆ, ಅವ ರಿಂದ ಏನಾಗಬೇಕಿತ್ತು" ಎಂದು ಪ್ರಶ್ನಿಸುತ್ತಲೇ, ಒಳ್ಳೆಯ ಬಟ್ಟೆಯನ್ನು ಧರಿಸಿ, ವಿದ್ಯಾವಂತನಾಗಿ ಕಾಣುತ್ತಿದ್ದ ಆತನು "ಅವರು ನಿಮಗೇನಾಗಬೇಕು ಸ್ವಾಮಿ" ಎಂದು ಕೇಳಿದ. "ನನ್ನ ಚಿಕ್ಕಮ್ಮನ ತಮ್ಮ." ರಾಮುವು ತಿಳಿಸಿದ ಮೇಲೆ, "ಅವರ ವಿಷಯ ನಿಮಗೇನಾದರೂ ಗೊತ್ತೇ" ಎಂದು ಪುನಃ ಆತನು

ವಿಚಾರಿಸಲು, ರಾಮುವು "ಯಾವ ವಿಷಯ" ಎಂದು ಕುತೂಹಲದಿಂದ ಕೇಳಿದ.

"ಅವರಿಗೆ ನಿಮ್ಮ ತಂಗಿಯನ್ನು ಕೊಟ್ಟು ಮದುವೆಯಂತೆ, ನಿಜವೇ."

"ಹೌದು, ಮೊನ್ನೆ ಲಗ್ನಪತ್ರಿಕೆ ಆಯಿತಂತೆ. ಅದು ನಿಮಗೆ ಹ್ಯಾಗೆ ಗೊತ್ತು."

"ನಾನೊಂದು ಸಮಾಚಾರ ತಿಳಿಸಬೇಕು, ದಯವಿಟ್ಟು ತಪ್ಪು ಅರ್ಥ ಮಾಡಿಕೊಳ್ಳಬೇಡಿ."

"ಇಲ್ಲ, ಅಗತ್ಯವಾಗಿ ಹೇಳಿ."

"ನಾನು ಪೋಲೀಸು ಆಫೀಸರು. ರಘುನಾಥರಾಯರನ್ನು ದಸ್ತಗಿರಿ ಮಾಡಲು ನನಗೆ ಹುಕುಂ ಬಂದಿದೆ"

ಈ ಮಾತನ್ನು ಕೇಳಿ ರಾಮುವಿಗೆ ತಲೆತಿರುಗಿದಂತಾಯಿತು—ಮಾತೇ ಹೊರಡಲಿಲ್ಲ. ಪುನಃ ಆತನೇ "ಈಗ ಸ್ವಲ್ಪ ದಿನಗಳಿಂದ ಆತ ತಲೆ ತಪ್ಪಿಸಿ ಕೊಂಡಿದ್ದಾನೆ. ಇಲ್ಲಿಗೆ ಬಂದಿರಬಹುದು ಎಂದು ಸಹಾ ನನಗೆ ವರ್ತಮಾನ ಬಂದಿತು" ಎಂದು ಹೇಳುತ್ತಲೂ, ರಾಮುವು "ಅವನ ಅಪರಾಧವಾದರೂ ಏನು" ಎಂದು ಕೇಳಿದ. "ಅವನೊಬ್ಬ ಪ್ರಸಿದ್ಧ ಜೂಜುಕೋರ. ಈಗ ಬಹಳ ದಿನಗಳಿಂದಲೂ ನಮಗೆ ಅವನಮೇಲೆ ಕಣ್ಣಿತ್ತು. ಮೊನ್ನೆ ಅವನ ಮನೆಯಲ್ಲಿ ಜೂಜಾಡುತ್ತಿದ್ದಾಗ ಸಿಬ್ಬಂದಿಯೊಡನೆ ಮುತ್ತಿದೆವು, ಮಿಕ್ಕವರೆಲ್ಲಾ ಸಿಕ್ಕರು. ಆತನು ಮಾತ್ರ ಯಾವುದೋ ರೀತಿಯಲ್ಲಿ ತಪ್ಪಿಸಿಕೊಂಡ. ಈ ವಿಷಯ ನಿಮ್ಮಲ್ಲೇ ಇರಬೇಕು, ನಾನು ವಿಶದವಾಗಿ ತಿಳಿಸಿದ ಕಾರಣ, ಅವನಿಗೆ ತಮ್ಮಯ್ಯನವರ ಮಗಳನ್ನು ಕೊಟ್ಟು ವಿವಾಹವೆಂದು ಕೇಳಿದೆ. ಆದ್ದರಿಂದ ಮುಂದಿನ ಮಾರ್ಗವನ್ನು ಸೂಕ್ತ ಕಂಡಂತೆ ನೀವು ನಿರ್ಧರಿಸಿಕೊಳ್ಳಲಿ ಎಂದು ತಿಳಿಸಿದೆ" ಎಂಬುದಾಗಿ ಕನಿಕರದಿಂದ ಆತನು ಹೇಳುತ್ತಲು ರಾಮುವು ಆತ ನನ್ನು ವಂದಿಸಿದ. ಇನ್ನು ಹೆಚ್ಚಿನ ವಿಷಯಗಳು ರಾಮುವಿಗೆ ಬೇಕಿರಲಿಲ್ಲ— ಸದ್ಯ ಮದುವೆಯ ಸಂಭ್ರಮ ಆಗುವುದಕ್ಕೆ ಮುಂಚೆಯೇ ರಘುವಿನ ಹಣೇಬರಹ ತಿಳಿಯಿತಲ್ಲಾ ಎಂದು ಮನಸ್ಸಿನಲ್ಲಿಯೇ ದೇವರಿಗೆ ನಮಸ್ಕರಿಸಿ, ಎದುರಿಗೆ ನಿಂತಿದ್ದ ಪೋಲೀಸಿನವನಿಗೆ ಕೃತಜ್ಞತೆಯನ್ನು ಹೇಳಿ ಮನೆಗೆ ಹಿಂದಿರುಗಿದ ಸೀತಮ್ಮನವರಿಗೆ ಈ ವಿಷಯ ತಿಳಿಸಬೇಕೋ ಬೇಡವೋ ಎನ್ನುವುದನ್ನು

ರಾಮುವಿನ ಕೈಯಲ್ಲಿ ನಿರ್ಧರಿಸಲಾಗಲಿಲ್ಲ. ತಿಳಿಸಿದರೂ ಅವರು ನಂಬು ತ್ತಾರೆಯೇ ಎಂಬ ಅನುಮಾನ ಬೇರೆ. ವೃಥಾ ರಘುವಿನ ಗುಣಕ್ಕೆ ಮಸಿ ಬಳಿಯಲು ತಾನೇ ಮಾಡಿದ ಊಹೆ ಎಂದರೆ ಮಾಡುವುದೇಕೆಂದು ಯೋಚಿ ಸುತ್ತಾ ರಾಮುವು ಮೊದಲು ಕಮಲಳ ಹತ್ತಿರ ಹೋಗಿ "ನೀನು ಕೊರಗ ಬೇಡ. ಈ ಮದುವೆ ಆಗಲಾರದು" ಎಂದು ಭರವಸೆಯನ್ನಿತ್ತ. ಕಮಲಳಿಗೆ ಅತ್ಯಂತ ಸಂತೋಷವಾಯಿತು. ರಾತ್ರಿ ತಮ್ಮಯ್ಯನವರು ಬಂದನಂತರ ರಾಮುವು ವಿಷಯವೆಲ್ಲವನ್ನೂ ಸರಿಯಾಗಿ ಹೇಳಿದ—ಅವರಿಗೂ ಅತ್ಯಂತ ಆಶ್ಚರ್ಯವಾಯಿತು. ಬಹುಶಃ ತಮ್ಮ ಪೆಟ್ಟಿಗೆಯಿಂದ ತೆಗೆದುಕೊಂಡ ಹಣವನ್ನು ಸೀತಮ್ಮನವರು ರಘುವಿನ ವಶಕ್ಕೇ ಕೊಟ್ಟಿರಬೇಕೆಂದು ಅವರಿಗೆ ತಕ್ಷಣ ಹೊಳೆಯಿತು ಹಣ ತೆಗೆದುಕೊಂಡ ದಿನವೇ ರಘುವು ತಮ್ಮ ಮನೆಗೆ ಬಂದು ಹೋಗಿದ್ದೂ ಅವರಿಗೆ ಗೊತ್ತಿತ್ತು. ತಮ್ಮಯ್ಯನವರು ಕೂಡಲೇ ಸೀತಮ್ಮನವರನ್ನು ಕರೆದು ಹಣವೇನಾಯಿತೆಂದು ಒತ್ತಿ ಒತ್ತಿ ಪ್ರಶ್ನಿಸಿದರು. ಪುನಃ ಆ ವಿಷಯವನ್ನು ಹೀಗೆ ಅನಿರೀಕ್ಷಿತವಾಗಿ ಕೇಳಬೇಕಾದರೆ ಏನೋ ಹೊಸದಾಗಿ ನಡೆದಿರಬೇಕೆಂದು ಅವರಿಗೂ ತೋರಿತು. "ಆ ಹೊತ್ತೇ ತಿಳಿಸಿದೆನಲ್ಲಾ" ಎಂದು ಮೆಲ್ಲಗೆ ಉತ್ತರವಿತ್ತರು. ತಮ್ಮಯ್ಯನವರಿಗೆ ಕೋಪ ಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ರಾಮುವಿನಿಂದ ತಿಳಿದ ವಿಷಯವನ್ನು ಸೀತಮ್ಮನವರಿಗೆ ಹೇಳಿದರು. ಸೀತಮ್ಮನವರ ದುಃಖವನ್ನು ವರ್ಣಿಸಲೀರದು ಅಳುತ್ತಾ ಹೇಗಾದರೂ ಮಾಡಿ ಅವನನ್ನು ಉಳಿಸಿಕೊಳ್ಳ ಬೇಕೆಂದು ಅಂಗಲಾಚಿದರು. ಆದರೆ ತಮ್ಮಯ್ಯನವರು ದುಷ್ಟ ಗುಣಗಳ ಪೋಷಕರಾಗಿರಲಿಲ್ಲ. ಕೆಟ್ಟ ಸ್ವಭಾವದವರನ್ನು ಕಂಡರೆ ಅವರಿಗೆ ರೋಷವು ಉಕ್ಕೇರುತ್ತಿತ್ತು. ಸ್ವತಃ ತಮ್ಮ ತಂದೆಯೇ ಅನ್ಯಾಯದ ಹಾದಿಯನ್ನು ಹಿಡಿದ ವೇಳೆಯಲ್ಲಿ ಅವರು ಖಂಡಿಸದೇ ಇರಲಿಲ್ಲ. ಸೀತಮ್ಮನವರ ಮಾತಿನಿಂದ ಅವರ ಮನಸ್ಸು ಇನ್ನೂ ಅಷ್ಟು ಉದ್ವಿಗ್ನವಾಯಿತು. ಅವರಿಗೂ ಮದುವೆಯ ಮುಂಚೆ ತಿಳಿಯಿತಲ್ಲಾ ಎಂಬ ಸಮಾಧಾನವೂ ಆಯಿತೆನ್ನಬಹುದು ಸೀತಮ್ಮ ನವರ ಮಾತಿಗೆ ಉತ್ತರವನ್ನು ಸಹಾ ಕೊಡದೆ ತಮ್ಮಯ್ಯನವರು ನೇರವಾಗಿ ಮಕ್ಕಳಿದ್ದ ಕೊಟಡಿಗೆ ಧಾವಿಸಿದರು. ಅವರ ಮನಸ್ಸಿನಲ್ಲಿ ತಾವೆಂತಹ ಅನ್ಯಾಯವನ್ನು ಮಾಡುತ್ತಿದ್ದೆನಲ್ಲಾ ಎಂಬ ಪಶ್ಚಾತ್ತಾಪದ ಕಳೆ ಕಾಣು

ತ್ತಿತ್ತು—ಏನೂ ಅರಿಯದ ಸರಳ ಹೃದಯದ ಮಗಳನ್ನು ಜೂಜುಗಾರನಿಗೆ ಕಟ್ಟಿ ಅವಳು ಆಜನ್ಮ ಪರಿಯಂತರ ಗೋಳಾಡುವಂತೆ ಮಾಡುತ್ತಿದ್ದೆನಲ್ಲಾ ಎಂದು ಸಹಾ ಅವರು ಯೋಚಿಸುತ್ತಿದ್ದರು. ತಂದೆಯು ಬಂದ ರೀತಿಯನ್ನು ನೋಡಿ ಕಮಲಳಿಗೆ ಏನು ಮಾತಾಡಲೂ ತೋಚಲಿಲ್ಲ. ತಮ್ಮಯ್ಯನವರೇ ನಿಧಾನವಾಗಿ "ಕಮಲೂ, ಎಂತಹ ಅಪರಾಧ ಮಾಡಿಬಿಡುತ್ತಿದ್ದೆ" ಎಂದರು. ವಿಷಯಗಳೆಲ್ಲಾ ಕಮಲಳಿಗೂ ತಿಳಿದಿತ್ತು. ಆದರೆ ತಂದೆಯ ಹೃದಯ ಸರಿಯಾಗಿ ಅರ್ಥವಾಗಿರಲಿಲ್ಲ. "ಎಲ್ಲಾ ದೈವ ಯತ್ನ. ನನಗೇನೋ ಸ್ವಲ್ಪವೂ ಈ ಮದುವೆಯಲ್ಲಿ ಇಷ್ಟವಿರಲಿಲ್ಲ—ಇಷ್ಟವೂ ಇಲ್ಲ" ಎಂದು ಮತ್ತೊಮ್ಮೆ ಹೇಳಿದಳು. ತಮ್ಮಯ್ಯನವರಿಗೆ ಅಲ್ಲಿಯೂ ಕೂತುಕೊಳ್ಳಲು ಮನಸ್ಸು ಸ್ಥಿಮಿತವಿರಲಿಲ್ಲ. ಎದ್ದು ಅಂಗಳದಲ್ಲಿ ತಿರುಗಾಡಲಾರಂಭಿಸಿದರು. ಸೀತಮ್ಮನವರ ರೋದನವಂತೂ ಕ್ರಮೇಣ ಮಿತಿಮೀರಿತು. ತಮ್ಮಯ್ಯ ನವರು ಮನೆಯಲ್ಲಿಲ್ಲದಾಗಲೆಲ್ಲಾ "ಯಾವ ಘಳಿಗೆಯಲ್ಲಿ ಈ ಶನಿಯನ್ನು ಮದುವೆ ಮಾಡಬೇಕೆಂದು ಯೋಚಿಸಿದೆನೋ, ಪಾಪ ರತ್ನದಂತಹ ಹುಡುಗನಿಗೆ ಇಲ್ಲದ ಸಲ್ಲದ ಆಪತ್ತು ಬಂದಿತು" ಎಂದು ಕಮಲಳನ್ನು ಮೂದಿಸಲಾರಂಭಿ ಸಿದರು. ಚಿಕ್ಕಮ್ಮನಿಂದ ಎಷ್ಟೇ ತೊಂದರೆಯಾಗಲಿ, ಮನಸ್ಸಿಗೆ ವ್ಯಥೆ ಯಾಗಲಿ, ಕಮಲಳು ಮತ್ತು ರಾಮುವು ಆ ವಿಷಯವನ್ನು ತಂದೆಯವರಿವಿಗೂ ಬಿಡುತ್ತಿರಲಿಲ್ಲ. ಗಂಡ ಹೆಂಡತಿಗೆ ಎಲ್ಲಿ ಜಗಳ ಬಂದೀತೊ ಎಂಬುದೇ ಅವರಿಗೆ ಭಯ. ಇವರಿಬ್ಬರಿಗೆ ಇದ್ದ ಈ ಗುಣದ ಅವಕಾಶವನ್ನು ಸೀತಮ್ಮ ನವರು ಸಂಪೂರ್ಣವಾಗಿ ದುರುಪಯೋಗಿಸುತ್ತಿದ್ದರು. ಮೊದಲಿನಿಂದಲೂ ರಾಮುವನ್ನು ಕಂಡರೆ ಅವರಿಗೆ ಆಗುತ್ತಿರಲಿಲ್ಲ. ಕೆಲವು ದಿನ ಕಮಲಳು ತಮ್ಮ ರಘುವಿನ ಮಡದಿಯಾಗಬಹುದೆಂಬ ದೂರಾಲೋಚನೆಯಿಂದ ಅವಳನ್ನು ಪ್ರೀತಿಸುತ್ತಿದ್ದರು. ಆದರೆ ಅವರ ಆಸೆ ನೆರವೇರಲಾರದೆಂದು ಸದ್ಯದ ಪರಿಸ್ಥಿತಿಯಿಂದ ತಿಳಿದಮೇಲಂತೂ, ಅವರು ಇಮ್ಮಡಿಯಾಗಿ ಹುಡುಗರನ್ನು ದ್ವೇಷಮಾಡಲು ಆರಂಭಿಸಿದರು. ತಮ್ಮ ಹೊರಗಿನ ಕೆಲಸ ಗಳಲ್ಲಿ ವಿರಾಮ ದೊರೆಯದೆ ಕಷ್ಟಪಡುತ್ತಿದ್ದ ತಮ್ಮಯ್ಯನವರು ಗೃಹಕೃತ್ಯದ ವಿಷಯದಲ್ಲಿ ತಲೆಹಾಕಲು ಆಗುತ್ತಲೇ ಇರಲಿಲ್ಲ.

ಇದಾದ ಮೂರು ದಿನಗಳ ನಂತರ ರಘುವು ಸಿಕ್ಕಿದನೆಂಬ ವರ್ತ ಮಾನವು ತಿಳಿಯಬಂದಿತು. ಸೀತಮ್ಮನವರು ಅನ್ನಾಹಾರವನ್ನು ತ್ಯಜಿಸಿ ಕೊರಗುತ್ತಿದ್ದರೂ, ತಮ್ಮಯ್ಯನವರು ತಮ್ಮ ಗೌರವ, ಮಾನ, ಮರ್ಯಾದೆ ಗಳನ್ನು ಗಮನದಲ್ಲಿಟ್ಟುಕೊಂಡಿದ್ದುದರಿಂದ ರಘುವಿನ ಹಿತಚಿಂತನೆ ಮಾಡಲು ಪ್ರಯತ್ನಿಸಲಿಲ್ಲ. ಪೋಲೀಸ್ ಸ್ಟೇಷನ್ನಲ್ಲಿದ್ದ ರಘುವನ್ನು ನೋಡಿಕೊಂಡು ಸೀತಮ್ಮನವರು ಅವನ ಮುಂದೆಯೂ ಅತ್ತು ಮನೆಗೆ ಹೋಗಲೋ ಬೇಡವೋ ಎಂದು ಸಂಕಟಪಡುತ್ತಾ ಹಿಂದಿರುಗಿದರು. ರಘುವಿನ ಸ್ಥಿತಿಯು ಶೋಚನೀಯ ವಾಗಿದ್ದರೂ ಅವನ ಸ್ನೇಹಿತರೂ ಜತೆಯಲ್ಲಿದ್ದುದರಿಂದ ಅವನಿಗೆ ಸೀತಮ್ಮ ನವರಿಗಾದಷ್ಟು ಸಂಕಟವಾಗಲು ಕಾರಣವಿರಲಿಲ್ಲ. ಇಷ್ಟು ವರ್ಷಗಳವರಿವಿಗೂ ಪತ್ತೆಯಿಲ್ಲದೆ ತನ್ನ ಕೆಲಸವನ್ನು ಮಾಡುತ್ತಿದ್ದವನು, ಯಾವುದೋ ಒಂದು ಸಣ್ಣ ವಿಷಯದಲ್ಲಿ ತನಗೂ ಇನ್ನೊಬ್ಬನಿಗೂ ಮನಸ್ತಾಪ ಬಂದು, ಈ ಸಂಕ ಟಕ್ಕೆ ಸಿಕ್ಕಿದ್ದ. ಸೀತಮ್ಮನವರಿಂದ ತಂದ ಹಣವನ್ನು ತಾನು ತಪ್ಪಿಸಿಕೊಳ್ಳಲು ಖರ್ಚುಮಾಡಿದ್ದರೂ ಪ್ರಯೋಜನವಾಗಿರಲಿಲ್ಲ.

ತಮ್ಮಯ್ಯನವರು ಮನೆಗೆ ಬಂದಾಗಲೆಲ್ಲಾ ಸೀತಮ್ಮನವರು ರಘುವಿಗೆ ಸಹಾಯಮಾಡಬೇಕೆಂದು ಬೇಡಿಕೊಳ್ಳಲು ಮರೆಯುತ್ತಿರಲಿಲ್ಲ. ಆದರೆ ತಮ್ಮಯ್ಯನವರದು ಯಾವಾಗಲೂ ಒಂದೇ ಮಾತು—ಕಡ್ಡಿ ತುಂಡುಮಾಡಿ ದಂತೆ. ರಘುವಿಗೂ ತಮಗೂ ಯಾವ ಸಂಬಂಧವೂ ಇಲ್ಲವೆಂದೂ, ಅವನ ವಿಷಯದಲ್ಲಿ ಪ್ರವೇಶಿಸುವುದಿಲ್ಲವೆಂದೂ, ಅವನು ಇನ್ನುಮೇಲೆ ಮನೆಗೆ ಸಹ ಬರಲಾಗದೆಂದೂ ಸೀತಮ್ಮನವರಿಗೆ ಮೊದಲನೆಯ ದಿನವೇ ಅವರು ತಿಳಿ ಸಿದ್ದರು. ಸೀತಮ್ಮನವರ ಮನಸ್ಸು ಒಳಗೇ ಕುದಿಯಲಾರಂಭಿಸಿತು. ಆದರೆ ಏನು ಮಾಡಲೂ ದಾರಿಯಿರಲಿಲ್ಲ. ರಘುವಿನಮೇಲೆ ಪೋಲೀಸರು ಹಾಕಿದ್ದ ಮೊಕದ್ದಮೆಯೂ ಜಾಗ್ರತೆಯಾಗಿ ವಿಚಾರಕ್ಕೆ ಬಂದಿತು. ತಮ್ಮಯ್ಯನವರಿಗೆ ತಿಳಿಯದಂತೆ ಸೀತಮ್ಮನವರು ಹಣ ತೆತ್ತು ವಕೀಲನನ್ನು ನೇಮಿಸಿದ್ದರು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಅಪರಾಧಿಗಳೆಲ್ಲಾ ತಪ್ಪಿತಸ್ಥ ರೆಂದು ನ್ಯಾಯಾಧೀಶರು ತೀರ್ಮಾನಿಸಿ ಕಾನೂನು ರೀತಿ ಶಿಕ್ಷೆ ವಿಧಿಸಿಯೇ ಬಿಟ್ಟರು.

೩

ಸೀತಮ್ಮನವರು ಬಹಳ ದಿನದ ಆಸೆಯು ಈಡೇರದಿದ್ದನಂತರ ಅವರು ಕಮಲಳ ವಿಷಯದಲ್ಲಿ ವಿಶ್ವಾಸವನ್ನು ತೋರಿಸಬೇಕಾದ ಪ್ರಮೇಯವೇ ಇಲ್ಲವೆಂದು ಭಾವಿಸಿದರು. ಅವಳು ಕುಳಿತರೆ ತಪ್ಪು, ನಿಂತರೆ ಸರಿಯಲ್ಲ ಎಂದ. ಹಳೆಯ ಕಾಲದ ಅತ್ತೆಯರು ಸೊಸೆಗೆ ಮಾಡುತ್ತಿದ್ದ ಮರ್ಯಾದೆಯನ್ನು ತೋರಿಸಲು ಆರಂಭಿಸಿದರು. ಕಮಲಳಿಗೆ ದಿಕ್ಕೇ ತೋಚದಂತಾಯಿತು. ಹೀಗೆ ಮನಸ್ಸಿನಲ್ಲಿಯೇ ಇನ್ನೆಷ್ಟು ದಿನ ಕೊರಗಬೇಕೋ ಎಂದು ಅನೇಕ ವೇಳೆ ಯೋಚಿಸುತ್ತಿದ್ದಳು. ಹೇಳಿಕೊಳ್ಳಲು ರಾಮುವನ್ನು ಬಿಟ್ಟರೆ ಆಪ್ತರಾದವರು ಯಾರೂ ಇರಲಿಲ್ಲ. ನೆರೆಹೊರೆಯವರಲ್ಲೆಲ್ಲಾ "ಅವಲಕ್ಷಣದ ಹುಡುಗಿ" ಎಂದು ಮಾತು ಮಾತಿಗೂ ಸೀತಮ್ಮನವರು ದೂಷಿಸುವುದನ್ನು ಅನೇಕ ವೇಳೆ ಕೇಳಿದ್ದರೂ, ಅವರನ್ನು ಪ್ರಶ್ನಿಸಿ ಎದುರು ಮಾತಾಡುವ ಗೋಜಿಗೆ ಹೋಗಿರಲಿಲ್ಲ. ರಾಮುವು ಮನೆಯಲ್ಲಿದ್ದಷ್ಟು ಹೊತ್ತು ಮಾತ್ರ ಕಮಲಳು ಸಂತೋಷವಾಗಿರಲು ಅವಕಾಶವಾಗುತ್ತಿತ್ತು. ಅನೇಕ ಸಾರಿ ಸಂದರ್ಭ ಬಂದಾಗಲೆಲ್ಲಾ ರಾಮುವು ಶಾಮುನನ್ನು ತಪ್ಪದೆ ಜ್ಞಾಪಿಸಿಕೊಳ್ಳುತ್ತಿದ್ದ. ಅವನಿಗೇ ತಿಳಿಯದಂತೆ ಯಾವುದೋ ಪ್ರಭಾವವನ್ನು ಶಾಮುನು ಬೀರಿದ್ದನೆನ್ನಬಹುದು. ಒಂದೊಂದು ಸಾರಿ, ಕೇವಲ ಗುಮಾಸ್ತನಾಗಿದ್ದರೂ ತನ್ನ ಅಣ್ಣನು ಶಾಮುನ ವಿಷಯದಲ್ಲಿ ಅಷ್ಟು ಗೌರವ ಮತ್ತು ಮರ್ಯಾದೆ ಇಟ್ಟಿರಲು ಕಾರಣವೇನು? ಎಂದು ಕಮಲಳೂ ಯೋಚಿಸುವಂತೆ ರಾಮುವಿನ ಮಾತುಗಳು ಅವಳ ಮನಸ್ಸಿಗೆ ತಾಕಿದ್ದವು. ಯೋಗ್ಯತೆ ಇಲ್ಲದಿದ್ದರೆ ವೃಥಾ ರಾಮುವು ಯಾಕೆ ಅವನಲ್ಲಿ ವಿಶ್ವಾಸ ತೋರುತ್ತಿದ್ದ? ಎಂದು ಕಮಲಳೇ ಪ್ರಶ್ನಿಸಿಕೊಳ್ಳುವಂತೆಯೂ ಅವಳ ಹೃದಯವು ಹೇಳಿತು. ಇದಕ್ಕೆ ಸರಿಯಾಗಿ ರಾಮುವು ಹಿಂದೆ ಬರೆದ ಕಾಗದಗಳಲ್ಲೆಲ್ಲಾ ಶಾಮುನ ವಿಷಯವನ್ನು ಪ್ರಶ್ನಿಸಿ ತಿಳಿದುಕೊಳ್ಳಲು ಉತ್ಸುಕತೆಯನ್ನು ತೋರಿದ್ದನೇ ವಿನಹ ಒಂದು ಸಾರಿಯಾದರೂ ರಘುವಿನ ಹೆಸರನ್ನು ಅವನು ಬರೆದೂ ಇರಲಿಲ್ಲ, ಹೇಳಿಯೂ ಇರಲಿಲ್ಲ. ಪಟೇಲರ ಹುಡುಗಿಯೊಡನೆ ಶಾಮುವು ಮಾತಾಡುತ್ತಿದ್ದ ವಿಷಯವನ್ನು ಕಮಲಳು ರಾಮುವಿಗೆ ಸೂಕ್ಷ್ಮವಾಗಿ ತಿಳಿಸಿದಳು. ರಾಮುವು ನಕ್ಕು, ಶಾಮುನು ಅಂತಹ ಕೀಳು ಮನಸ್ಸಿನವನಲ್ಲವೆಂದು ಭರವಸೆ ಕೊಟ್ಟು, ಯಾವ

ಸಮಯದಲ್ಲಿ, ಯಾತಕ್ಕಾಗಿ, ಮಾತಾಡುತ್ತಿದ್ದನೆನ್ನುವುದನ್ನು ಚೆನ್ನಾಗಿ ವಿಚಾರಿಸಿ ನಂತರ ಕೆಟ್ಟ ಅಥವಾ ಒಳ್ಳೆಯ ಅಭಿಪ್ರಾಯಕ್ಕೆ ಬರಬೇಕೆಂದು ಕಮಲಳಿಗೆ ತಿಳಿಸಿದ. ಕಮಲಳು ಆ ರೀತಿ ವಿಚಾರಿಸಿ ಒಂದು ಅಭಿಪ್ರಾಯಕ್ಕೆ ಬಂದಿರಲಿಲ್ಲ. ಕಣ್ಣಿಂದ ನೋಡಿದ್ದರ ಜತೆಗೆ, ಸೀತಮ್ಮನವರ ಮಾತುಗಳು ಅವಳ ಅಭಿಪ್ರಾಯಕ್ಕೆ ಕಾರಣವಾಗಿತ್ತು. ಸೀತಮ್ಮನವರ ಈಗಿನ ನಡೆವಳಿಕೆಯನ್ನು ನೋಡಿದಮೇಲಂತೂ ಅವರ ಹೃದಯವೆಂತಹದು ಎನ್ನುವ ವಿಷಯವು ಕಮಲಳಿಗೆ ಚೆನ್ನಾಗಿ ಅರ್ಥವಾಯಿತು.

ಲಗ್ನಪತ್ರಿಕೆಯ ಶಾಸ್ತ್ರ ಮುಗಿದು ಮದುವೆಯು ನಿಂತಿದ್ದರಿಂದ ಕೆಲವರು ಹುಡುಗಿಯ ಜಾತಕ ಕೆಟ್ಟದೆಂದೂ, ನಕ್ಷತ್ರ ಸರಿಯಿಲ್ಲವೆಂದೂ ಮಾತಾಡಿಕೊಳ್ಳುತ್ತಿದ್ದರು. ತಮ್ಮಯ್ಯನವರು ಒಳ್ಳೆಯ ವ್ಯಾಪಾರಿಗಳೂ ಮರ್ಯಾದಸ್ತರೂ ಆಗಿದ್ದರೂ ಅವರ ಮಗಳನ್ನು ವಿವಾಹಕ್ಕಾಗಿ ಕೇಳಲು ಯಾರೂ ಮುಂದೆ ಬರಲಿಲ್ಲ ತಮ್ಮಯ್ಯನವರ ದೃಷ್ಟಿಗೆ ಬಿದ್ದಿದ್ದ ಒಬ್ಬಿಬ್ಬರನ್ನು ಕಮಲಳು ಒಪ್ಪದೆ ಹೋಗಿದ್ದಳು. ಅಂತೂ ಕಮಲಳಿಗೆ ೧೬ ವರ್ಷ ತುಂಬಿ ಹೋದರೂ ವಿವಾಹದ ಸೂಚನೆ ಕಾಣಲಿಲ್ಲ. ಈ ಮಧ್ಯೆ ರಾಮುವು ತನ್ನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವನೆಂಬ ಸುದ್ದಿಯೂ ಬಂದು ಮುಟ್ಟಿತು. ತಮ್ಮಯ್ಯನವರಿಗೂ ಕಮಲಳಿಗೂ ಅತ್ಯಂತ ಸಂತೋಷವಾಯಿತು. ಮುಂದೆ ಮಗನು ತಮ್ಮ ವ್ಯಾಪಾರದಲ್ಲಿ ನೆರವಾಗಲಿ ಎಂದು ತಮ್ಮಯ್ಯನವರು ಅಭಿಪ್ರಾಯವನ್ನು ರಾಮುವಿಗೆ ತಿಳಿಸಿದರು. ಆದರೆ ಅವನಿಗೆ ಪೂರ್ಣವಾಗಿ ಇಷ್ಟವಿರಲಿಲ್ಲ. ಯೋಚಿಸಿ ಹೇಳುವುದಾಗಿ ತಂದೆಗೆ ಮಾತುಕೊಟ್ಟ. ಒಂದು ವಾರದ ನಂತರ, ರಾಮುವಿನ ಗುಣವನ್ನು ಅರಿತಿದ್ದ ಒಬ್ಬ ಅಧಿಕಾರಿಗಳು ಕಲ್ಕತ್ತಾದಿಂದ, ಅವನು ತೇರ್ಗಡೆ ಹೊಂದಿದುಕ್ಕಾಗಿ ಸಂತೋಷಪಟ್ಟು, ಮುಂದೆ ಕೆಲಸ ಹುಡುಕುವಂತಿದ್ದರೆ ತಮ್ಮ ಕೈಲಾದ ಸಹಾಯಮಾಡುವುದಾಗಿ ಬರೆದ ಪತ್ರವೂ ರಾಮುವಿನ ಕೈಸೇರಿತು. ತಮ್ಮಯ್ಯನವರಿಗೆ ಅಸಮಾಧಾನವಾದರೂ ರಾಮುವು ಅವರೊಡನೆ ಬಹಳ ಹೊತ್ತು ಚರ್ಚಿಸಿ, ಕೊನೆಗೆ ಒಂದೆರಡು ವರ್ಷವಾದರೂ, ಯಾವುದಾದರೂ ಸರ್ಕಾರಿ ಕೆಲಸಮಾಡಿ, ಜ್ಞಾನ ಸಂಪಾದಿಸಿದ ಮೇಲೆ ವ್ಯಾಪಾರಕ್ಕೆ ಕೈಹಾಕುವುದಾಗಿ ಭರವಸೆಯನ್ನಿತ್ತು, ಕಾಗದ ಬರೆದಿದ್ದ ಅಧಿಕಾರಿಗಳು ಮದರಾಸಿಗೆ ಪ್ರವಾಸ ಬಂದಿದ್ದುದರಿಂದ, ಮಾರನೆಯ

ದಿನವೇ ಅವರ ಭೆಟ್ಟಿಯಾಗಲು ನಿಶ್ಚಯಿಸಿ, ತಂದೆಗೆ ತಿಳಿಸಿದ. ರಾಮುವು ಕೆಲಸ ದೊರೆತರೆ, ಕೆಲವು ಕಾಲವಾದರೂ ಕಮಲಳನ್ನು ಆ ಮನೆಯ ವಾತಾವರಣದಿಂದ ಹೊರಗೆ ಕರೆದುಕೊಂಡು ಹೋಗಬೇಕೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿ, ಅವಳಿಗೂ ತನ್ನ ಅಭೀಷ್ಟೆಯನ್ನು ಹೇಳಲು, ಕಮಲಳಿಗೆ ಅತ್ಯಂತ ಸಂತೋಷವಾಯಿತು. ಮಾರನಹಳ್ಳಿ, ಮಂಗಳೂರು ಬಿಟ್ಟರೆ ಬೇರೆ ಎಲ್ಲಿಯೂ ಹೋಗಲು ಅವಕಾಶವೇ ಇಲ್ಲದಂತಾಗಿದ್ದ ಕಮಲಳಿಗೆ ಅಣ್ಣನು ಮದರಾಸಿಗೆ ಕರೆಸಿಕೊಳ್ಳುವನೆಂದು ತಿಳಿದು ಹರ್ಷವಾಗಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ರಾಮುವು ಹೊರಡುವ ದಿನ, ತಾವಿಬ್ಬರೂ ಹುಡುಗರಾಗಿದ್ದಾಗ, ಮತ್ತು ತಮ್ಮಯ್ಯನವರು ಎರಡನೇ ಮದುವೆ ಮಾಡಿಕೊಂಡಾಗ, ಆಡಿಕೊಂಡಿದ್ದ ಮಾತುಗಳನ್ನು ಜ್ಞಾಪಿಸಿದಳು.

# ನಾಲ್ಕನೆಯ ಭಾಗ

## ೧

ಶಾಮುನು ಮದರಾಸನ್ನು ಸೇರಿದ ರಾತ್ರಿಯೇ ಕಿಟ್ಟುವು ತನ್ನ ಊರಿಗೆ ಹೋಗುವ ಏರ್ಪಾಡನ್ನು ಮಾಡಿದ್ದ. ಸ್ನೇಹಿತನನ್ನು ತನ್ನ ಊರಿಗೆ ಕರೆದು ಕೊಂಡುಹೋಗಬೇಕೆಂಬ ಉದ್ದಿಶ್ಯದಿಂದಲೇ ಅವನು ಶಾಮುನಿಗೆ ಕೂಡಲೇ ಬರುವಂತೆ ಪತ್ರ ಬರೆದಿದ್ದು. ಶಾಮುನು ಎಷ್ಟು ಬೇಡವೆಂದು ಸಂಕೋಚ ಪಟ್ಟರೂ ಕೇಳದೆ ಕಿಟ್ಟುವು ಅವನೊಡನೆ ತನ್ನ ಊರಿಗೆ ಪ್ರಯಾಣ ಬೆಳಸಿದ. ಎರಡು ದಿನಗಳ ನಂತರ ಕಿಟ್ಟುವಿನ ಮನೆಯಲ್ಲಿ ಒಂದು ದೊಡ್ಡ ಹಬ್ಬವು ಜರುಗ ಬೇಕಾಗಿದ್ದುದರಿಂದ, ಕಿಟ್ಟುವಿನ ತಂದೆ ಅವನನ್ನು ತಪ್ಪದೆ ಬರಲೇಬೇಕೆಂದು ಬರೆದಿದ್ದರು. ಈ ಸಮಾರಂಭಕ್ಕೆ ತನ್ನ ಹೆಂಡತಿಯೂ, ಅವಳ ಮನೆಯುವರೂ ಬರುವರೆಂದು ಕಿಟ್ಟುವಿಗೆ ತಿಳಿದಿತ್ತು. ಆದ್ದರಿಂದಲೇ ಅವನು ಸಿದ್ಧತೆಗಳನ್ನು ಮಾಡಿಕೊಂಡು ಆವಸರದಿಂದ ಪ್ರಯಾಣ ಮಾಡಿದ್ದು. ಏನು ವಿಶೇಷವೆಂದು ಎಷ್ಟು ಪ್ರಶ್ನಿಸಿದರೂ ಶಾಮುನಿಗೆ ಸರಿಯಾದ ಉತ್ತರವು ಸಿಗಲಿಲ್ಲ—ಕಿಟ್ಟು ವಿಗೂ ತಿಳಿದಿರಲಿಲ್ಲ. ಯಾವುದೋ ಒಂದು ಮುಖ್ಯವಾದ ಕೆಲಸವು, ಹಬ್ಬವು, ಜರುಗಬೇಕಾಗಿದೆಯೆಂದು ಮಾತ್ರ ಕಿಟ್ಟುವಿನ ತಂದೆ ಬರೆದಿದ್ದರು. ಕಿಟ್ಟುವಿನ ಊರು ಮದರಾಸಿಗೆ ಕೇವಲ ೬೦ ಮೈಲಿ ದೂರವಿದ್ದುದರಿಂದ ಇಬ್ಬರೂ ರಾತ್ರಿ ಊಟದ ಹೊತ್ತಿಗೆ ಮನೆ ಸೇರಿದರು. ಕಿಟ್ಟುವು ಸ್ನೇಹಿತನನ್ನು ತಂದೆಗೂ ಇತರರಿಗೂ ಪರಿಚಯ ಮಾಡಿಕೊಟ್ಟು, ಶಾಮುನ ವಿಷಯದಲ್ಲಿ ಕಾಲುಘಂಟೆ ಗುಣಕಥನ ಮಾಡಿದ. ಮಾರನೆಯ ದಿನ ತಮ್ಮ ಮನೆತನದ ಸ್ವಾಮಿಗಳು ಆಗಮಿಸುವುದರಿಂದ ಪಾದಪೂಜೆ, ಭಿಕ್ಷೆ, ಇತ್ಯಾದಿ ಶಾಸ್ತ್ರೋಕ್ತ ಏರ್ಪಾಡುಗಳು ವಿಜೃಂಭಣೆಯಿಂದ ಆಗುವಂತೆ ಕಿಟ್ಟುವಿನ ತಂದೆ ನಿರ್ಧರಿಸಿರುವರೆಂದೂ, ಅದ ಕ್ಕಾಗಿ ನಂಟರೆಲ್ಲಾ ಆಹ್ವಾನಿತರಾಗಿರುವರೆಂದೂ ಕಿಟ್ಟುವಿಗೆ ಅವನ ತಾಯಿ ಯಿಂದ ತಿಳಿಯಬಂದಿತು. ಶಾಮುನು ಕಿಟ್ಟುವಿನ ಮುಖವನ್ನು ನೋಡಿ ನಕ್ಕು "ನೀನೇ ಬೇರೆ ಊಹಿಸಿದ್ದೆಯಲ್ಲೋ" ಎಂದ. ಕಿಟ್ಟುವಿನ ಬಾಯಿಂದ ಮಾತೇ ಹೊರಡಲಿಲ್ಲ—ಆದರೂ ತನ್ನ ಮನೆಗೆ, ನೂತನ ಮಡದಿ ಮತ್ತು ಆಕೆಯ

ಬಂಧುಗಳು ಬರುವರೆಂದು ಕಿಟ್ಟುವಿಗೆ ತಂಗಿಯಿಂದ ಖಚಿತವಾಗಿ ತಿಳಿಯಿತು. ರಾತ್ರಿ ಊಟವಾದಮೇಲೆ ಮಿತ್ರರಿಬ್ಬರೂ ಹಾಸಿಗೆಯ ಮೇಲೆ ಕುಳಿತಿದ್ದಾಗ, "ಈ ಏರ್ಪಾಡೆಲ್ಲಾ ನಷ್ಟವಲ್ಲವೇ, ಇದರಿಂದೇನು ಪ್ರಯೋಜನ" ಎಂದು ಶಾಮನು ಪ್ರಶ್ನಿಸಿದ. ಕಿಟ್ಟುವಿಗೂ ಇದರಿಂದೇನು ಪ್ರಯೋಜನವಿಲ್ಲವೆಂದು ತಿಳಿದಿದ್ದರೂ "ನಾಲ್ಕು ಜನ ಸಮಾಜದಲ್ಲಿ ಹೇಗೆ ದಾರಿಸಿದರೆ ಹಾಗೆ ನಾವು ಕಣ್ಣು ಮುಚ್ಚಿಕೊಂಡು ನಡೆಯಬೇಕು, ಅದೇ ಧರ್ಮ, ಕಾನೂನು, ರೀತಿ, ನೀತಿ" ಎಂದು ಉತ್ತರಕೊಟ್ಟ. ಒಳ್ಳೆಯ ಸಮಾಜ, ಒಳ್ಳೆಯ ಧರ್ಮ, ರೀತಿ ನೀತಿ ಎನ್ನಿಸಿತು ಶಾಮನ ಮನಸ್ಸಿಗೆ. ಯೋಚಿಸಿದರೆ ಆತ್ಮಕ್ಕೆ, ಹೃದಯಕ್ಕೆ, ಕೇವಲ ಅನ್ಯಾಯ, ತಪ್ಪು ಎಂದು ಹೊಳೆಯುವುದನ್ನು ನಾಲ್ಕು ಜನರು ಮಾಡಿದ ರೆಂದು ಅನುಸರಿಸುವಂತೆ ಕಾನೂನು, ರೀತಿ ನೀತಿಗಳನ್ನು ವಿಧಿಸಲು ಸಮಾ ಜಕ್ಕೆ ಹಕ್ಕೆಲ್ಲಿದೆ ಎಂದು ಶಾಮನು ಆಲೋಚಿಸಿದ. ಆ ರೀತಿ ನಡೆಯದಿದ್ದಲ್ಲಿ ಆ ಮನುಷ್ಯನು ಸಮಾಜ ದ್ರೋಹಿ, ನಾಸ್ತಿಕನೆಂದು ಪರಿಗಣಿಸಲ್ಪಡುವನೆಂದು ಕಿಟ್ಟುವು ವಿಶದೀಕರಿಸಿದಮೇಲೆ ಶಾಮನಿಗೆ ನಗು ಬಂದಿತು.

ಮಾರನೆಯ ದಿನ ಪ್ರಾತಃಕಾಲ ೫ ಘಂಟೆಯಿಂದಲೇ ಮನೆಯಲ್ಲಿ ಗಡಿ ಬಿಡಿಗೆ ಆರಂಭವಾಯಿತು. ೬ ಘಂಟೆ ಹೊತ್ತಿಗೆ ಕಿಟ್ಟುವಿನ ಹೆಂಡತಿ ಮನೆ ಯವರೆಲ್ಲಾ ಬಂದಿಳಿದರು. ತೋರಣ ಚಪ್ಪರಗಳೆಲ್ಲಾ ಹಿಂದಿನ ದಿನವೇ ನಿರ್ಮಿಸಲ್ಪಟ್ಟಿತ್ತು. ಮೇಳ, ಬ್ಯಾಂಡು, ಮುಂತಾದ ವಾದ್ಯಗಳ ಏರ್ಪಾಡೂ ಆಗಿತ್ತು. ಕಿಟ್ಟುವಿನ ತಂದೆ ತಾಯಿ ಸ್ನಾನಮಾಡಿ, ಶುಭ್ರ ಮಡಿಯನ್ನುಟ್ಟು ಅಲ್ಲಿಂದಿಲ್ಲಿಗೆ ಓಡಾಡಲು ಪ್ರಾರಂಭಿಸಿದರು. ಈ ಗಲಾಟೆಯಲ್ಲೂ ಕಿಟ್ಟುವು ಶಾಮನಿಗೆ ತಿಳಿಯದೆಂದು ಭಾವಿಸಿ, ಎರಡು ಮೂರು ಸಾರಿ ತನ್ನ ಹೆಂಡತಿ ಯೊಡನೆ ಮಾತಾಡಲು ಪ್ರಯತ್ನಿಸಿದ. ಸುಮಾರು ೯ ಘಂಟೆಯ ಹೊತ್ತಿಗೆ ಶ್ರೀ ಶ್ರೀ ಶ್ರೀ ಗುರುಗಳು ಪರಿವಾರ ಸಮೇತ, ವಾದ್ಯದ ನಿನಾದದಲ್ಲಿ, ಶ್ರೋತ್ರೀಯರ ಶ್ಲೋಕ ಪಠಣಗಳ ಮಧ್ಯೆ, ಅಲಂಕೃತವಾಗಿದ್ದ ಮೇನದಲ್ಲಿ ಕುಳಿತು ದಯಮಾಡಿಸಿದರು. ಕಿಟ್ಟುವಿನ ಮನೆಯವರೆಲ್ಲಾ ಭಯ ಭಕ್ತಿ ಗಳಿಂದ ಇದಿರ್ಗೊಂಡು, ಸಾಷ್ಟಾಂಗ ನಮಸ್ಕಾರ ಮಾಡಿ ಗುರುಗಳಿಗಾಗಿ ತಯಾರಿಸಿದ್ದ ಮಂಟಪಕ್ಕೆ ಅವರನ್ನು ಕರೆದುಕೊಂಡು ಬಂದರು. ಪಾದಪೂಜೆ, ಅಭಿಷೇಕ, ದೇವತಾರಾಧನೆ, ಮುಂತಾದ ಕಾರ್ಯಗಳೆಲ್ಲಾ ಯಥಾವಿಧಿಯಾಗಿ

ನಡೆದವು. ಕಿಟ್ಟುವಿನ ತಂದೆಯವರು ಪಾದಪೂಜೆಗೆ ಬೆಳ್ಳಿಯ ರೂಪಾಯಿಗಳನ್ನೇ ತರಿಸಿದ್ದರು. ಮಧ್ಯಾಹ್ನ ಒಂದು ಘಂಟೆಗೆ ಸುಮಾರು ೩೦೦ ಜನಕ್ಕೆ ಪುಷ್ಕಳವಾದ ಮೃಷ್ಟಾನ್ನ ಭೋಜನವೂ, ಗುರುಗಳಿಗೆ ನಾನಾವಿಧವಾದ ಹಣ್ಣು ಹಂಪಲ, ಹಾಲು, ಮುಂತಾದವುಗಳಿಂದ ಕೂಡಿದ ಫಲಹಾರವೂ ಆಯಿತು. ಗುರುಗಳು ಬಂದಿದ್ದವರನ್ನೆಲ್ಲಾ ಶಾಸ್ತ್ರೋಕ್ತವಾಗಿ ಆಶೀರ್ವದಿಸಿ, ತಮ್ಮ ಕೋಣೆಯಲ್ಲಿ ಸುಖಾಸೀನರಾಗಲು ತೆರಳಿದರು.

ಶಾಮುನಿಗೆ ಮಾಡಲು ಬೇರೆ ಕೆಲಸವೇನೂ ಇರಲಿಲ್ಲ. ಗುರುಗಳೊಡನೆ ಕೆಲವು ಮಾತುಗಳನ್ನಾದರೂ ಆಡೋಣವೇ ಎನ್ನಿಸಿತು. ಕಿಟ್ಟುವಿಗೆ ತಿಳಿಸಿ, ಗುರುಗಳು ಇಳಿದಿದ್ದ ಕೋಣೆಯ ಬಳಿಗೆ ಬಂದ. ಕಿಟ್ಟುವಿಗೂ, ಶಾಮನು ತನ್ನ ಬಳಿಯಿಂದ ಹೊರಟಿದ್ದು ಒಂದು ವಿಧದಲ್ಲಿ ಅನುಕೂಲವೇ ಆಯಿತು. ಬಾಗಿಲಿನಲ್ಲಿದ್ದ ಸ್ವಾಮಿಗಳ ಪರಿವಾರದವರು ಶಾಮುನನ್ನ ಒಳಗೆ ಬಿಡಲು ಅನುಮಾನಿಸಿದರು. ನಂತರ ಅಪ್ಪಣೆ ಪಡೆದು ಬಂದು, ಸ್ವಾಮಿಗಳನ್ನು ಕಂಡೊಡನೆ, ಯಾವ ರೀತಿ ನಮಸ್ಕರಿಸಬೇಕು, ಹೇಗೆ ಕುಳಿತುಕೊಳ್ಳಬೇಕು, ಸಂಬೋಧಿಸಬೇಕಾದ ಮಾರ್ಗವೇನು, ಎನ್ನುವುದನ್ನೆಲ್ಲಾ ಶಾಮುನಿಗೆ ತಿಳಿಸಿ ಒಳಗೆ ಬಿಟ್ಟರು. ಕೋಣೆಯೊಳಗೆ ಕಾಲಿಟ್ಟೊಡನೆ ಗುರುಗಳ ದರ್ಶನವಾಯಿತು. ಬಾಗಿಲಿನಲ್ಲಿ ಮುಂಚೆಯೇ ತಿಳಿಸಲ್ಪಟ್ಟಿದ್ದಂತೆ ಸಾಷ್ಟಾಂಗ ನಮಸ್ಕಾರ ಮಾಡಿ, ಗುರುಗಳಿಗೆ ಸುಮಾರು ೧೦ ಅಡಿ ದೂರದಲ್ಲಿ ಅವರ ಕೈಸನ್ನೆಯಂತೆ ಕುಳಿತುಕೊಂಡ. ಕೋಣೆಯೆಲ್ಲವೂ ಸುಗಂಧಮಯವಾಗಿತ್ತು. ಗೋಡೆಗಳಿಗೆ ಎಲ್ಲಾ ದೇವರುಗಳ ಚಿತ್ರಪಠಗಳೂ, ಗುರುಗಳ ಚಿತ್ರಗಳೂ ಹಾಕಲ್ಪಟ್ಟಿದ್ದವು. ಒಂದು ಸುಂದರವಾದ ಮಂಟಪದಲ್ಲಿ ಗುರುಗಳ ದೇವತಾ ಸಾಮಗ್ರಿಗಳು ಇಡಲ್ಪಟ್ಟಿದ್ದವು ಗುರುಗಳಿಗಾಗಿ ಮೆತ್ತನೆ ಒರಗು ದಿಂಬುಗಳೂ ಜಿಂಕೆಯ ಚರ್ಮದ ಆಸನವೂ, ಹತ್ತಿರದಲ್ಲೇ ಹಣ್ಣುಹಂಪಲದ ತಟ್ಟೆಯೂ, ಹಾಲಿನ ಪಾತ್ರೆಯೂ ಅಣಿಯಾಗಿತ್ತು. ಗುರುಗಳ ಮುಖವನ್ನು ನೋಡಿದೊಡನೆ, ಒಳ್ಳೆಯ ವಿದ್ಯಾವಂತರೆಂದು ಶಾಮುನಿಗೆ ತೋಚಿತು. ಸುಮ್ಮನೆ ಕುಳಿತಿದ್ದ ಶಾಮುನನ್ನು ನೋಡಿ ಗುರುಗಳೇ ಮುಗುಳ್ನಗೆಯಿಂದ "ಏನು, ಎಲ್ಲಾ ಸೌಖ್ಯವೇ—ನೀವು ಈ ಮನೆಯವರಿಗೆ ಮಿತ್ರರಂತೆ, ಏನು ಮಾಡುತ್ತಿದ್ದೀರಿ, ಎಲ್ಲಿ ಕೆಲಸ" ಮುಂತಾದ ಏಳೆಂಟು ಪ್ರಶ್ನೆಗಳನ್ನು ಹಾಕಿದರು. ಶಾಮುನು ಅವು

ಗಳಿಗೆ ಎಷ್ಟು ಅವಶ್ಯಕವೋ ಅಷ್ಟೇ ಉತ್ತರಕೊಟ್ಟು, "ತಮ್ಮ ದರ್ಶನವಾದದ್ದು ನನ್ನ ಪುಣ್ಯವಿಶೇಷ" ಎಂದ. "ಸಂತೋಷ. ಪರಮಾತ್ಮನು ನಿಮಗೆ ಕಲ್ಯಾಣವನ್ನುಂಟುಮಾಡಲಿ" ಎಂದು ಆಶೀರ್ವದಿಸಿದಮೇಲೆ ಶಾಮನು "ಈಚೆಗೆ ನಮ್ಮ ಸಂಪ್ರದಾಯವೂ ಮತವೂ ಕ್ಷೀಣತೆಯನ್ನು ಹೊಂದುತ್ತಿರಲು ಕಾರಣವೇನು" ಎಂದು ಪ್ರಶ್ನಿಸಿದ. ಗುರುಗಳು ನಗುತ್ತಾ, "ನಮ್ಮ ಮತವು ಎಂದೆಂದಿಗೂ ಕ್ಷೀಣವಾಗುವುದಿಲ್ಲ — ಆಗಲಾರದು. ಹಾಗೆ ಕಾಣುತ್ತಿರುವುದು ಕೇವಲ ಕೆಲವರ ಭಾವನೆ" ಎಂದರು.

"ಆದರೆ, ನಮ್ಮ ಪೂರ್ವಿಕರಂತೆ, ಆಚಾರ, ಮಡಿ, ಗುರುಹಿರಿಯರಲ್ಲಿ ಭಕ್ತಿ ಶ್ರದ್ಧೆ ಈಗಿನ ಕಾಲದವರಿಗೆ ಇಲ್ಲದಿರಲು ಕಾರಣ?"

"ಅದು ಅವರವರ ನಂಬಿಕೆಯನ್ನು ಅನುಸರಿಸಿದೆ."

"ನಂಬಿಕೆಯು ಸಡಿಲವಾಗಲು ಬಹುಶಃ ಜನರಿಗೆ ಮಠಗಳಿಂದ ಉಪಕಾರವು ಹೆಚ್ಚಾಗಿ ಆಗದಿರುವುದೇ ಅಲ್ಲವೇ?"

"ಮಠಗಳಾಗಲೀ, ಗುರುಗಳಾಗಲೀ ಜನರಿಂದ ಉಪಕಾರ ಪಡೆದು ನಿಲ್ಲಬೇಕೇ ವಿನಹ, ಜನರಿಗೆ ಯಾವ ರೀತಿ ಉಪಕಾರ ಮಾಡಬೇಕು?"

"ಜನರಿಂದ — ಶಿಷ್ಯರಿಂದ, ಸೇವೆ ಸಲ್ಲಿಸಿಕೊಂಡನಂತರ, ಅವರಿಗೂ ಸರಿಯಾದ ದಾರಿ ತೋರಿಸುವುದು, ಉಪಕಾರ ಮಾಡುವುದು, ಮಠಗಳ ಕರ್ತವ್ಯವಲ್ಲವೇ?"

"ದಾರಿ ತೋರಿಸುವುದೇನೋ ಕರ್ತವ್ಯ. ಆದರೆ ಆ ದಾರಿಯಲ್ಲಿ ನಡೆಯುವುದೂ ಬಿಡುವುದೂ ಜನರ ಇಷ್ಟ."

"ಕೇವಲ ದಾರಿ ತೋರಿಸಿದ ಮಾತ್ರಕ್ಕೆ ನಡೆಯಲು ಚೈತನ್ಯ ಬೇಕಲ್ಲವೆ? ಆ ಚೈತನ್ಯ ಬರಲು ತಕ್ಕ ಜ್ಞಾನ, ಬುದ್ಧಿ, ಮಾರ್ಗ ಕಲ್ಪಿಸಿಕೊಡಬೇಕಾದ್ದು ಮಠಗಳೇ ಅಲ್ಲವೇ."

"ಹೌದು. ಅದನ್ನೂ ನಾವು ಒಪ್ಪಿಕೊಳ್ಳುತ್ತೇವೆ. ಆದರೆ ಯಾವ ರೀತಿ ಚೈತನ್ಯ ಬೇಕೆನ್ನುವುದನ್ನು, ಯಾರು, ಯಾವ ಮಠಕ್ಕೆ ಹೋಗಿ ಕೇಳಿದ್ದಾರೆ!"

"ಕೇಳಬೇಕಾಗಿಲ್ಲ. ಜನರ ಸ್ಥಿತಿ, ಕಷ್ಟ, ಸಂಕಟ, ಸಹಾಯ ಹೀನತೆ, ಮುಂತಾದವು ಜ್ಞಾನಿಗಳೂ, ವಿದ್ಯಾವಂತರೂ ಆದ ಮಠಾಧಿಪತಿಗಳಿಗೆ ತಿಳಿಯುವುದಿಲ್ಲವೇ?"

"ಹೌದು ಮಗೂ, ನೀನು ಹೇಳುವುದೇನೋ ಸರಿ. ಆದರೆ ಜನರ ಕಷ್ಟ, ಸುಖ ಇವುಗಳನ್ನೇ ಯೋಚಿಸುತ್ತಾ ನಾವು ಕುಳಿತರೆ, ಕೇವಲ ಈ ಪ್ರಪಂಚದ ಅನಿಶ್ಚಿತ ವಿಷಯಗಳಲ್ಲಿ ಪ್ರವೇಶಿಸಿದಂತೆ ಆಗುತ್ತದೆಯೇ ವಿನಹ, ನಮ್ಮ ಧ್ಯೇಯ ಮುಟ್ಟಿದಂತೆ ಆಗುವುದಿಲ್ಲ." ಸ್ವಾಮಿಗಳು ಸ್ವಲ್ಪ ಉದ್ವೇಗ ದಿಂದಲೇ ಉತ್ತರಕೊಟ್ಟರು. ಶಾಮನಿಗೆ ಹಿಂಜರಿಯುವ ಕಾರಣವೇನೂ ಇರಲಿಲ್ಲ. ಸಮಯ ಸಿಕ್ಕಾಗ ಕೇವಲ ಮುಖಸ್ತೋತ್ರಮಾಡದೆ, ಇರುವ ವಿಷಯಗಳನ್ನು, ಸಮಾಜದ ಅಭಿಪ್ರಾಯವನ್ನು ಸರಿಯಾಗಿ ಹೇಳಿಬಿಡುವುದೇ ಲೇಸೆಂದು ನಿರ್ಧರಿಸಿದ.

"ಈ ಪ್ರಪಂಚದ ಕಷ್ಟ, ಸುಖ, ಮೊದಲು ನೋಡಿಕೊಂಡಮೇಲಲ್ಲವೇ ಸ್ವಾಮಿ, ಮುಂದಿನ ಯೋಚನೆ. ಈಗ ನಾವು ತೊಂದ್ರೆಪಡುತ್ತಿದ್ದರೂ, ಇತರರ ಅಪಹಾಸ್ಯಕ್ಕೆ ಗುರಿಯಾದರೂ, ಸ್ವರ್ಗ, ಕೈಲಾಸ ಎಂದು ಕುಳಿತುಕೊಳ್ಳು ವುದು ಸರಿಯೇ?"

ಗುರುಗಳಿಂದ ಯಾವ ಉತ್ತರವೂ ಬಾರದಿರಲು, ಶಾಮನು ಒಂದೆರಡು ನಿಮಿಷ ಅವರನ್ನೇ ನೋಡಿ, ಪುನಃ

"ನಮ್ಮ ಸಮಾಜದ, ಸಂಸ್ಕೃತಿಯ ಮುನ್ನಡೆಗೆ, ಮಠಗಳೇ ಆಧಾರ ಸ್ತಂಭಗಳು. ಈ ಅಭಿಪ್ರಾಯದಿಂದಲೇ ಹಿಂದಿನ ಮಹಾಮಹಿಮಾವಂತರಾದ ಗುರುಗಳೆಲ್ಲರೂ ತಮ್ಮ ತನು ಮನ ಧನಗಳಿಂದ ಸಮಾಜವನ್ನೂ, ಸಂಸ್ಕೃತಿ ಯನ್ನೂ ಅಭಿವೃದ್ಧಿಪಡಿಸಿದರು. ಅವರ ಸತತ ಶ್ರಮದಿಂದಲೇ ನಮ್ಮ ಸಂಸ್ಕೃತಿಯು ಇಲ್ಲಿಯವರೆಗೆ ನಡೆದುಬಂದಿದೆ. ಆದರೆ ಈಗ ಕ್ಷೀಣತೆಯ ಮಾರ್ಗವನ್ನು ಅನುಸರಿಸುವುದು ತುಂಬಾ ಶೋಚನೀಯ" ಎಂದ.

"ಕಾಲದ ಮಹಿಮೆ! ಅದಕ್ಕೆ ಮಠಗಳೇನು ಮಾಡಿಯಾವು. ನಾವು ವರಿಸುವ ಪೀಠಗಳಿಗೆ, ಸರಿಯಾದ ಮಾರ್ಗದಲ್ಲಿ ಅಂದರೆ ಜ್ಞಾನಾರ್ಜನೆಯಲ್ಲಿ ಕಾಲ ವಿನಿಯೋಗಮಾಡಿ, ಧರ್ಮವನ್ನು ತೋರಿಸಬೇಕಾದ್ದು ನಮ್ಮ ಕರ್ತವ್ಯ. ಅದು ಬಿಟ್ಟು ಸಮಾಜದ ನಿತ್ಯ ಜೀವನಕ್ಕೆ ಸೇರಿದ ಅನಿವಾರ್ಯ ಗಳನ್ನೂ, ಕುಂದು ಕೊರತೆಗಳನ್ನೂ ಯೋಚಿಸುವುದರಲ್ಲಿ ನಮ್ಮ ಕಾಲ ವಿನಿಯೋಗವಾದರೆ, ಪರಮಾತ್ಮನ ಧ್ಯಾನಕ್ಕೆ, ಮುಕ್ತಿಯ ಹಾದಿಗೆ, ಅವಕಾಶ

ವೆಲ್ಲಿ? ನೀವು ಹೇಳಿದ ಕೆಲಸಗಳು ಸಮಾಜದ ಮುಖಂಡರಿಗೆ ಸೇರಿದ್ದು."
ಗುರುಗಳು ತಾಳ್ಮೆಯಿಂದ ಉತ್ತರಕೊಟ್ಟರು.

"ಸಮಾಜದ ಮುಖಂಡರಿಗೆ ಸೇರಿದ್ದೇನೋ ನಿಜ. ಆದರೆ, ಅವರಿಗೂ ತಿಳುವಳಿಕೆ ಹೇಳಿ, ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುವುದು ಅನುಯಾಯಿಗಳನ್ನುಳ್ಳ ಒಂದು ಸಂಸ್ಥೆಗೆ ಸೇರಿದ್ದಲ್ಲವೇ? ಜನಬಲ ಧನ ಸಹಾಯವಿರುವ ಗುರುಗಳು ಮನಸ್ಸು ಮಾಡಿದರೆ, ಕೆಲಸವು ನಡೆಯು ವಂತೆ, ಸ್ವಾರ್ಥಭಾವನೆಯು ತಾಂಡವವಾಡುತ್ತಿರುವ ಈ ಕಾಲದಲ್ಲಿ ಯಾವ ಮುಖಂಡನು ತಾನೇ ಮಾಡಿಯಾನು?"

"ಅಂದರೆ, ನಮ್ಮ ಜ್ಞಾನಾರ್ಜನೆ, ಪರಮಾತ್ಮನ ಪೂಜೆ ಪುನಸ್ಕಾರ ಗಳನ್ನು ತ್ಯಜಿಸಿ, ಸಾಂಸಾರಿಕರಂತೆ, ದಿನದಲ್ಲಿ ನಡೆಯುವ, ಈ ಪ್ರಪಂಚಕ್ಕೆ ಸೇರಿದ ಕಷ್ಟ ಸುಖಗಳನ್ನು ನೋಡಬೇಕೆಂದು ನಿಮ್ಮ ಅಭಿಪ್ರಾಯವೋ?"

"ಹಾಗೇನೂ ಅಲ್ಲ—ಸಮಾಜದ ಏಳಿಗೆಗೆ, ಉನ್ನತಿಗೆ, ಸ್ವಲ್ಪ ಕಾಲ ವಿನಿಯೋಗಿಸಿದ ಮಾತ್ರಕ್ಕೆ ಉಳಿದ ಕೆಲಸಗಳಿಗೆ ಅಡ್ಡಿ ಏನೂ ಆಗಲಾರದು."

"ಮನಸ್ಸಿಗೆ ಸ್ಥಿಮಿತವಿಲ್ಲದಂತೆ ನಾನಾ ಯೋಚನೆಗಳು ಸುತ್ತಿಕೊಂಡರೆ ನಮ್ಮ ಕೆಲಸಕ್ಕೆ ಅಡ್ಡಿಬಂದಂತಲ್ಲವೇ?"

"ಹಾಗೆ ಅಡ್ಡಿ ಬರುವಂತಿದ್ದರೆ, ಗುರುಪೀಠದ ಜನ್ಮದಾತರೂ, ಮಹಾ ಜ್ಞಾನಿಗಳೂ, ದೇವಾಂಶಸಂಭೂತರೂ ಆದ ಶ್ರೀ ಶಂಕರ, ಮಧ್ವ, ರಾಮಾನುಜ, ಮುಂತಾದ ಜಗದ್ವಿಖ್ಯಾತ ಗುರುಗಳು ಸಮಾಜದ ಸಂಸ್ಕೃತಿಯ ಅಭಿವೃದ್ಧಿ ಕಾರ್ಯವನ್ನು ಮಾಡುತ್ತಿದ್ದರೆ?—ಅಡ್ಡಿ ಬರುವುದಿಲ್ಲವೆಂದೂ, ತಮ್ಮ ಕಾರ್ಯವು ಇದೇ ಎಂದೂ ಅವರು ಸಮಾಜವನ್ನು ತಿದ್ದಿ, ನಿರ್ಮಿಸಿದ್ದಕ್ಕಲ್ಲವೇ ಅದು ಈವರಿಗೂ ತಲೆತಗ್ಗಿಸದೆ ನಡೆದುಬಂದಿರುವುದು."

"ಅವರು ಹಾಕಿಕೊಟ್ಟಿರುವ ಮೇಲ್ಪಂಗ್ತಿಯನ್ನೇ ನಾವು ಈಗ ಅನು ಸರಿಸುತ್ತಿರುವುದು. ಆಗಿನ ಜನರು ಭಕ್ತಿ ಶ್ರದ್ಧೆಗಳಿಂದ ಕೂಡಿದ್ದರು—ಈಗಿನ ಸಮಾಜಕ್ಕೆ ಅದು ಬೇಕಿಲ್ಲ."

"ಭಕ್ತಿ, ಶ್ರದ್ಧೆ ಹುಟ್ಟುವಂತೆ ಮಾಡುವುದು ಸಹಾ ಗುರುಪೀಠಕ್ಕೆ ಸೇರಿದ್ದೆನ್ನಬಹುದು. ಅವು ಈಗ ಕಮ್ಮಿಯಾಗಿರುವುದಕ್ಕೆ ಮಠಗಳು ದೂರ ವಾಗಿರುವುದೇ ಕಾರಣವಲ್ಲವೇ?"

"ನಿಮ್ಮದು ತಪ್ಪು ಅಭಿಪ್ರಾಯ. ಮಠಗಳು ಎಂದಿಗೂ ದೂರವಾಗಿಲ್ಲ. ಅವುಗಳಿಂದ ಉಪಯೋಗ ಪಡೆಯಬೇಕೆನ್ನುವವರಿಗೆ ಯಾವಾಗಲೂ ಫಲಿತಾಂಶ ಉತ್ತಮವಾಗಿಯೇ ದೊರೆತಿದೆ."

"ಫಲಿತಾಂಶ ದೊರೆತೇ ಇಲ್ಲವೆಂದು ನಾನು ಹೇಳುತ್ತಿಲ್ಲ. ಯಾರು ಉಪಯೋಗ ಪಡೆಯಬೇಕೆಂಬ ಉದ್ದೇಶ್ಯದಿಂದಲೇ ಬರುತ್ತಾರೋ, ಅವರಿಗೆ ಮಾತ್ರ ಉಪಕಾರವಾಗಬಹುದು—ಒಟ್ಟಿನಲ್ಲಿ ಸಮಾಜಕ್ಕೆ ಜಾತಿಗೆ ಹೆಚು. ಪ್ರಯೋಜನವಾಗುತ್ತಿಲ್ಲ—ಇದರಿಂದಲೇ ಮೊದಲಿನಷ್ಟು ಭಕ್ತಿಭಾವಗಳು ಇಲ್ಲದಿರುವುದು"

ಗುರುಗಳು ಒಂದು ಉದ್ಧರಣೆ ನೀರನ್ನು ಬಾಯಿಗೆ ಹಾಕಿಕೊಂಡು ಕಣ್ಣಿಗೆ ಒತ್ತಿಕೊಂಡರು. ದೇವರಮೇಲಿಂದ ಕೆಳಗೆಬಿದ್ದ ಹೂವನ್ನು ಸರಿಯಾಗಿಟ್ಟು ಮಡಿಬಟ್ಟೆಯಿಂದ ಮೈವರಸಿಕೊಂಡು ಕೇಳಿದರು.

"ನಿಮ್ಮ ಅಭಿಪ್ರಾಯದಲ್ಲಿ ಯಾವ ರೀತಿ ಮಠಗಳು ಸಮಾಜಕ್ಕೆ ನೆರವಾಗಬೇಕು."

"ನಮ್ಮ ಸಮಾಜವು ತಲೆ ಎತ್ತಿ ನಿಲ್ಲಲು ಬೇಕಾದ ಅನುಕೂಲತೆಗಳನ್ನು ಮಾಡುವುದರಲ್ಲಿ—ವಿದ್ಯಾಭ್ಯಾಸದಲ್ಲಿ ಮತ್ತು ನಾವು ಈ ಪಂಗಡದಲ್ಲಿ ಹುಟ್ಟಿದೆವಲ್ಲಾ ಎಂದು ಪಶ್ಚಾತ್ತಾಪ ಪಡದಿರುವಂತೆ ಮಾಡುವುದರಲ್ಲಿ."

"ವಿದ್ಯಾಭ್ಯಾಸಕ್ಕೆ ಈಗ ಬೇಕಾದ ಸಹಕಾರವು ಮಠಗಳಿಂದ ದೊರೆಯುತ್ತಿಲ್ಲವೇ?"

"ದೊರೆಯುತ್ತಿದೆ—ಆದರೆ ಕೇವಲ ಸಂಸ್ಕೃತ ಪಾಂಡಿತ್ಯಕ್ಕೆ ಮಾತ್ರ ಸಂಸ್ಕೃತ ಮತ್ತು ಉನ್ನತ ಜ್ಞಾನಾರ್ಜನೆಯ ಮಾರ್ಗ, ತಿಳುವಳಿಕೆಯನ್ನೇ ಹುಡುಕಿಕೊಂಡು ಹೋಗುವ ಅಭ್ಯರ್ಥಿಗೆ ಬೇಕೇ ವಿನಹ ಅದರಿಂದ ಪ್ರತಿನಿತ್ಯದ ಜೀವನವು ನಡೆಯಲಾರದು. ಸನ್ನಿವೇಶಗಳಿಗೆ, ಕಾಲಕ್ಕೆ ತಕ್ಕಂತೆ, ಜನರು ತಮ್ಮ ಮುಂದೆ ಬರುವ ಮಾರ್ಗಗಳನ್ನು ಹಿಡಿದು, ಜಯಿಸುವಂತೆ, ಮಠಗಳು ಬೆನ್ನುತಟ್ಟಿ ನಿಲ್ಲಬೇಕು, ಪ್ರೋತ್ಸಾಹ ಕೊಡಬೇಕು, ಒಗ್ಗಟ್ಟಿನಿಂದ ನಡೆಯಲು ಸಹಕರಿಸಬೇಕು."

"ಅಂದರೆ?"

"ಈಗಿನ ವಿದ್ಯಾಭ್ಯಾಸಕ್ಕೆ ಅವಕಾಶವನ್ನು ಕಲ್ಪಿಸಬೇಕು—ಧನ ಸಹಾಯಮಾಡಬೇಕು. ನಮ್ಮ ಬಡ ಹುಡುಗರು ಅಭಿವೃದ್ಧಿಗೆ ಬರುವಂತೆ ಮಾಡಲು, ಹಳ್ಳಿ ಹಳ್ಳಿಯಲ್ಲಿಯೂ ಸಂಸ್ಥೆಗಳನ್ನೇರ್ಪಡಿಸಬೇಕು, ವಿದ್ಯೆಯು ಸಿಕ್ಕಿದಮೇಲೆ, ಪಶ್ಚಾತ್ತಾಪಕ್ಕೆ ಕಾರಣವಿಲ್ಲದಂತೆ, ಮುಂದೆ ಜೀವನೋಪಾಯ ವನ್ನು ಕಲ್ಪಿಸುವ ಮಾರ್ಗಗಳನ್ನು ಸೃಜಿಸಬೇಕು ಇದರಿಂದ ಸಮಾಜವು ಬಲಗೊಳ್ಳುತ್ತದೆ, ನಮ್ಮ ಜನರಿಗೆ ಹೊಸ ಚೇತನ ಬರುತ್ತದೆ—ಆಗ ಇತರರೂ ನೋಡಿ ನಮಗೆ ನ್ಯಾಯವಾಗಿ ಸಲ್ಲಬೇಕಾದ ಗೌರವವನ್ನು ಕೊಟ್ಟಾರು, ಈಗ ನೋಡುತ್ತಿರುವ ತಾತ್ಸಾರ ಮನೋಬುದ್ಧಿಯು ಹೋದೀತು."

"ಸರಿ. ಇವೆಲ್ಲಕ್ಕೂ ಬೇಕಾದ ಧನ."

"ಗುರುಪೀಠವು ಮನಸ್ಸುಮಾಡಿದರೆ, ಧನಕ್ಕೇನು! ಅನೇಕ ಮಹನೀ ಯರು ಮಠಗಳಿಗೆ—ಈ ಕಾರ್ಯಕ್ಕಾಗಿ ವಿನಿಯೋಗವಾಗುವಂತಿದ್ದರೆ— ಬೇಕಾದ ಹಣವನ್ನು ಕೊಡಬಲ್ಲರು. ಇದೂ ಅಲ್ಲದೆ ಗುರುಗಳು ಸಂಚಾರ ಮಾಡಿದಾಗ ಬರುವ ಧನದಲ್ಲಿ ಅರ್ಧವನ್ನಾದರೂ ಆದೇ ಸ್ಥಳಕ್ಕೆ ಕೊಟ್ಟು, ಸಂಸ್ಥೆಗಳನ್ನು ಸ್ಥಾಪಿಸಿ, ಮೇಲ್ವಿಚಾರಣೆಯ ಅಧಿಕಾರವನ್ನು ಮಠಗಳೇ ವಹಿಸ ಬಹುದು. ಇದರಿಂದ ವಿದ್ಯೆ ಇಲ್ಲದಿರುವವರಿಗೆ ವಿದ್ಯೆ ದೊರಕುತ್ತದೆ—ವಿದ್ಯೆ ಪಡೆದು ಜೀವನಕ್ಕೆ ಇಲ್ಲದೆ ಕಷ್ಟಪಡುತ್ತಿರುವವರಿಗೆ ಮಾರ್ಗವನ್ನು ಕಲ್ಪಿಸಿ ದಂತಾಗುತ್ತದೆ. ಇದು ಉತ್ತಮಕಾರ್ಯವೆಂದೂ, ಅತ್ಯಾವಶ್ಯಕವೆಂದೂ ಜನರಿಗೆ ಮನವರಿಕೆಯಾದೊಡನೆ ಹಣವು ತಾನಾಗಿ ದೊರೆಯುವುದರಲ್ಲಿ ಸಂದೇಹವಿಲ್ಲ." ಶಾಮನು ಸ್ಫೂರ್ತಿಯಿಂದ ಮಾತಾಡಿದ. ಇಷ್ಟು ಹೊತ್ತಿಗೆ ಮಧ್ಯಾಹ್ನ ೩ ಘಂಟೆಯಾಗಿದ್ದುದರಿಂದ, ಕಿಟ್ಟುವಿನ ತಂದೆಯವರು ಒಂದು ಬೆಳ್ಳಿ ಚೆಂಬು ಹಾಲಿನೊಡನೆ ಸ್ವಾಮಿಗಳ ಕೋಣೆಗೆ ಪ್ರವೇಶಿಸಿದರು. ಗುರುಗಳು ಮುಗುಳ್ನಗೆ ಸೂಸಿ, ಅವರನ್ನು ಕುಳಿತುಕೊಳ್ಳುವಂತೆ ಅಪ್ಪಣೆ ಕೊಟ್ಟಮೇಲೆ ಶಾಮನ ಪಕ್ಕದಲ್ಲಿ, ನಮ್ರತೆಯಿಂದ ಅವರು ಪದ್ಮಾಸನ ಹಾಕಿದರು. ಶಾಮನು ಇಲ್ಲಿ ಬಂದು ಏನು ಮಾತಾಡುತ್ತಿರಬಹುದು ಎನ್ನುವುದು ಅವರಿಗೂ ಕುತೂಹಲ ವನ್ನುಂಟುಮಾಡಿತ್ತು. ಆದರೆ ಅಲ್ಲಿ ಅದನ್ನು ಕೇಳುವಂತಿರಲಿಲ್ಲ. ಗುರುಗಳು ಒಂದೆರಡು ನಿಮಿಷ ಒಳಗೆದ್ದು ಹೋಗಿ ಬೇರೆ ಮಡಿಯನ್ನುಟ್ಟು ಹಿಂದಿರುಗಿದರು. ಪುನಃ ತಮ್ಮ ಆಸನದಮೇಲೆ ಕುಳಿತು ಮೂರು ಬಾರಿ ಆಚಮನ ಮಾಡಿದ

ಮೇಲೆ ಕಿಟ್ಟುವಿನ ತಂದೆಯುವರು ಹಾಲನ್ನು ಬೆಳ್ಳಿ ಲೋಟಕ್ಕೆ ಬಗ್ಗಿಸಿ ಮುಂದಿಟ್ಟರು. ಗುರುಗಳು ಲೋಟವನ್ನು ಕೈಗೆ ತೆಗೆದುಕೊಳ್ಳುವುದಕ್ಕೆ ಮುಂಚೆಯೇ, ಶಾಮನಿಗೂ ಕೊಡುವಂತೆಯೂ, ತಾವೂ ತೆಗೆದುಕೊಳ್ಳ ಬೇಕೆಂದೂ ಕಿಟ್ಟುವಿನ ತಂದೆಗೆ ಹೇಳಿದರು. ನಿಧಾನವಾಗಿ ಮೂವರೂ ಹಾಲನ್ನು ಕುಡಿದಮೇಲೆ ಗುರುಗಳು ಪುನಃ ಆಚಮನಮಾಡಿ, ಕೈ ಬಾಯಿಗಳನ್ನು ಮಡಿ ಬಟ್ಟೆಯಿಂದ ಒರಸಿಕೊಂಡು ಕಿಟ್ಟುವಿನ ತಂದೆಯನ್ನು ಉದ್ದೇಶಿಸಿ, ಶಾಮನ ಕಡೆ ದೃಷ್ಟಿ ಬೀರುತ್ತಾ "ಇವರು ಬಹಳ ಶ್ರಮಜೀವಿಗಳೆಂದು ತೋರುತ್ತೆ. ಆಧುನಿಕ ಸಮಾಜದ ಆವಶ್ಯಕತೆಗಳನ್ನು ಬಹಳ ಚೆನ್ನಾಗಿ ತಿಳಿದುಕೊಂಡಿದ್ದಾರೆ. ತಿಳಿದಿರುವುದನ್ನು ಧೈರ್ಯವಾಗಿ ಮಂಡಿಸಬಲ್ಲ ಚೈತನ್ಯವೂ ಇದೆ" ಎಂದರು. ಶಾಮನ ವಿಷಯವಾಗಿ ಕಿಟ್ಟುವೇ ಅವನ ತಂದೆಗೆ ಸಾಕಷ್ಟು ತಿಳಿಸಿದ್ದ. ಮೇಧಾವಿಯಾದರೂ ಈಗಿನ ಕಾಲದ ಹುಡುಗನಾದುದರಿಂದ, ಗುರುಗಳ ಸಾನ್ನಿಧ್ಯಕ್ಕೆ ಎಲ್ಲಿ ಮನ ನೊಯ್ಯುವಂತೆ ಏನಾದರೂ ಮಾತಾಡಿದ್ದಾನೋ ಎಂದು ಮಾತ್ರ ಅವರು ಯೋಚಿಸಿದ್ದರು. ಆದರೆ ಸ್ವಾಮಿಗಳಿಂದಲೇ ನಡೆದ ಮಾತಿನ ತಾತ್ಪರ್ಯ ತಿಳಿದಮೇಲೆ ಅವರಿಗೂ ಅತ್ಯಂತ ಸಂತೋಷವಾಯಿತು. ಶಾಮನು ಪುನಃ "ಒಂದು ಸಮಾಜವು ತಲೆ ಎತ್ತಿ ನಿಲ್ಲಬೇಕಾದರೆ, ಅದಕ್ಕೆ ಧನ ಜನ ಸಹಾಯ ಬೇಕು. ತಮ್ಮವರಿಂದಲೇ ಶಕ್ತಿ ಪಡೆದು ನಿಲ್ಲುವುದೇ ಧರ್ಮವಾದರೂ, ಒಂದು ಸಮಾಜವು ಸ್ತುತ್ಯ ಕಾರ್ಯಗಳನ್ನು ಮಾಡಿದರೆ, ಮತ್ತೊಂದು ಸಮಾಜದವರಿಂದಲೂ ಸಹಾಯ ಪಡೆಯಬಹುದು" ಎಂದ.

ಗುರುಗಳು ನಗುತ್ತಾ "ಹೇಗೆ?" ಎಂದು ಪ್ರಶ್ನಿಸಿದರು.

"ಯಾವ ಸಮಾಜಕ್ಕೇ ಆಗಲಿ ಮುಖ್ಯವಾದ ಆವಶ್ಯಕತೆಗಳು ಸೇವೆ, ಸಹಾಯ, ಪರೋಪಕಾರ, ಮುಂತಾದವು. ಈಗ ನೋಡಿ, ದೂರದೇಶಗಳಿಂದ ಈ ದೇಶಕ್ಕೆ ಬಂದು ನೆಲಸಿರುವ ಅನೇಕ ಮತಸ್ಥರಿದ್ದಾರೆ. ಅವರು ಮಿಷನರಿಗಳನ್ನು ಸ್ಥಾಪಿಸಿಕೊಂಡು, ತಮ್ಮ ಸಮಾಜವನ್ನು ಭದ್ರಮಾಡಿರುವುದರ ಜತೆಗೆ ಪರೋಪಕಾರ ಮಾಡುತ್ತಿರುವುದರಿಂದ ಇತರ ಜನರಿಗೂ ಅವರ ಧ್ಯೇಯಗಳೂ ಕಾರ್ಯಗಳೂ ಮೆಚ್ಚುಗೆಯಾಗುತ್ತಿದೆ. ಇದರಿಂದ ಅವರ ಮತವು ಚೆನ್ನಾಗಿ ಬೆಳೆಯುತ್ತಿರುವುದಲ್ಲದೆ, ಬೇರೂರುತ್ತಿದೆ. ಆ ಮಿಷನರಿಗಳು

ಇಂತಹದೇ ಕೆಲಸ ಮಾಡಬೇಕೆಂದು ನಿಯಮವನ್ನೇನೂ ಇಟ್ಟುಕೊಂಡಿಲ್ಲ. ಅವರು ಆಸ್ಪತ್ರೆಗಳೂ, ಶಾಲೆಗಳೂ, ಸಂಸ್ಥೆಗಳೂ, ಮುದ್ರಣ ಕಾರ್ಯಗಳೂ, ಮುಂತಾದ ಅನೇಕ ಸಂಘಗಳಿಂದ ಜನಸಹಾಯ ಮಾಡುತ್ತಿರುವುದು ನಮ ಗೆಲ್ಲಾ ಕಾಣುತ್ತಿದೆ. ನಾವಾದರೋ ನಮ್ಮ ಸಮಾಜದಲ್ಲಿ ಯಾತಕ್ಕೆ ಹುಟ್ಟಿದೆವೋ ಎಂದು ಗೋಳಾಡುತ್ತಿದ್ದೇವೆ. ಇದಕ್ಕೆ ಕಾರಣ ನಮ್ಮಲ್ಲಿ ಒಗ್ಗಟ್ಟಿಲ್ಲದಿರುವುದು, ಜೀವನಕ್ಕೆ ಮಾರ್ಗವಿಲ್ಲದಿರುವುದು." "ಒಬ್ಬರಿಂದ ನಾವು ಕಲಿಯಬೇಕಾದ ವಿಷಯಗಳೇನೂ ಇಲ್ಲ. ನಮ್ಮ ಹಿಂದಿನವರು ಹಾಕಿಕೊಟ್ಟ ಮೇಲ್ಪಂಗ್ತಿಗಳನ್ನು ವಿದೇಶಿಯರು ಈಗ ಅನುಸರಿಸುತ್ತಿರುವ ರೆಂದು ನಾವು ಕೇಳಿದ್ದೇವೆ" ಸ್ವಾಮಿಗಳು ಮಾತಾಡಿದರು.

"ಕಲಿಯಬೇಕಾದ ವಿಷಯಗಳಿದ್ದರೆ ಕಲಿತಲ್ಲಿ ತಪ್ಪೇನು? ನಮ್ಮ ಹಿಂದಿನವರು ತೋರಿಸಿದ ಮಾರ್ಗಗಳನ್ನು ವಿದೇಶಿಯರು ಅನುಸರಿಸುತ್ತಿರು ವಾಗ ನಾವು ಬಿಟ್ಟಿರುವುದು ನ್ಯಾಯವೇ?" ಶಾಮನು ಮಾತು ಪೂರೈಸುವ ವೇಳೆಗೆ ಸರಿಯಾಗಿ ಬಾಗಿಲಿನಲ್ಲಿದ್ದ ಸ್ವಾಮಿಗಳ ಪಾರುಪತ್ತೇಗಾರನು, "ಮಧ್ಯಾಹ್ನದ ಪೂಜೆಗೆ ವೇಳೆಯಾಯಿತು" ಎಂದು ತಿಳಿಸಿದ. ವಿಶ್ವಾಸದಿಂದ ಮಾತಾಡಿದ ಗುರುಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಶಾಮನು ಮಹಡಿಯ ಮೇಲೆ ತನಗಾಗಿ ಮೀಸಲಾಗಿದ್ದ ಕೋಣೆಯಕಡೆ ಹೆಜ್ಜೆಹಾಕಿದ. ಕಿಟ್ಟುವಿನ ತಂದೆ ಇನ್ನೂ ಸ್ವಾಮಿಗಳ ಬಳಿಯಲ್ಲೇ ಕುಳಿತಿದ್ದರು.

೨

ಶಾಮನು ಯಾವಾಗ ಬಂದುಬಿಡುತ್ತಾನೋ ಎಂದು ನಿಮಿಷಕ್ಕೆ ಹತ್ತು ಬಾರಿ ಕಿಟಕಿಯಿಂದ ನೋಡುತ್ತಾ ಕಿಟ್ಟುವು ತನ್ನ ಹೆಂಡತಿಗೆ, ನಾಚಿಕೆ ಬಿಟ್ಟು ಗಂಡನೊಡನೆ ಮಾತಾಡುವುದನ್ನು ಕಲಿಸಲು ಪ್ರಯತ್ನಿಸುತ್ತಿದ್ದ. ಯಾರಾ ದರೂ ಬಂದು ಬಾಗಿಲು ತಟ್ಟಿದರೆ ಸಾಕು, ಓಡಿಹೋಗಬಹುದೂ ಎಂದು ನಾಚಿಕೆಯಿಂದ ತಲೆ ಎತ್ತದೆ ನಿಂತು ನೆಲವನ್ನು ಉಂಗುಷ್ಟದಿಂದ ಕೆರೆಯುತ್ತಿದ್ದ ಕಿಟ್ಟುವಿನ ಹೆಂಡತಿಯು, ಮೆಟ್ಟಲು ಹತ್ತಿದ ಶಬ್ದವನ್ನು ಕೇಳದೊಡನೇ ಪಕ್ಕದ ಬಾಗಿಲಿನಿಂದ ಒಳಕ್ಕೆ ನುಣುಚಿಕೊಂಡಳು. "ಏನಯ್ಯಾ ಒಳಕ್ಕೆ ಬರಬಹುದೇ" ಎಂದು ಪ್ರಶ್ನಿಸುತ್ತಾ ಶಾಮನು ಬಾಗಿಲು ತಟ್ಟಿದ. ನಗುತ್ತಾ ಕಿಟ್ಟುವು

ಬಾಗಿಲನ್ನು ತೆರೆದು "ಎಲ್ಲಿ ಹೋಗಿದ್ದ್ಯೋ ಇಷ್ಟು ಹೊತ್ತು. ಕಾಫಿ, ತಿಂಡಿ ಎಲ್ಲಾ ತಣ್ಣಗಾಯಿತು" ಎಂದು ಮೇಜಿನಮೇಲಿದ್ದ ತಟ್ಟೆಯನ್ನು ತೋರಿಸಿದ. "ನಿನಗೆ ಬಿಸಿಬಿಸಿಯಾಗಿ ಸಿಕ್ಕಿತೋ ಇಲ್ಲವೋ" ಎಂದು ಚೇಷ್ಟೆಮಾಡುತ್ತಾ, ಶಾಮನು ಫಲಹಾರವನ್ನು ಮುಗಿಸಿ, ತಾನು ಗುರುಗಳ ದರ್ಶನಮಾಡಿದ್ದು, ನಡೆದ ಮಾತುಗಳು, ಅವರ ಅಭಿಪ್ರಾಯವೆಲ್ಲವನ್ನೂ ವಿಶದವಾಗಿ ಹೇಳಿದ. ಶಾಮನ ಬುದ್ಧಿಗಾಗಿ ಮನಸ್ಸಿನಲ್ಲೇ ಸಂತೋಷಪಟ್ಟರೂ, ಕಿಟ್ಟುವಿಗೆ ಇವ ನ್ಯಾಕೆ ಹೀಗೆ ಧ್ಯೇಯಗಳು, ಸೇವೆ, ಉಪಕಾರ, ತತ್ವ ಎಂದು ಹೊಡೆದಾಡು ತ್ತಾನೋ ಎನ್ನಿಸಿತು. "ನಿನಗೆಲ್ಲೋ ಹುಚ್ಚು ಹಿಡಿದುಹೋಗುತ್ತೆ ಶ್ಯಾಮು, ಹೀಗೆ ನೀನು ಬುದ್ಧಿ ಓಡಿಸುತ್ತಿದ್ದರೆ ಈಗ ನನಗೆ ತತ್ವ ಬೇಕಿಲ್ಲವಯ್ಯಾ, ಅನ್ಯಾಯವೋ ಮೋಸವೋ ಮೊದಲು ಹೊಟ್ಟೆಪಾಡು ನೋಡಬೇಕು" ಎಂದ. ಶಾಮನಿಗೆ ತನ್ನ ಮಿತ್ರನು ಯಾವ ದೃಷ್ಟಿಯಿಂದ ಆ ರೀತಿ ಮಾತಾಡಿದ ನೆಂಬುದು ತಿಳಿಯದೇಹೋಗಲಿಲ್ಲ. ಒಂದೆರಡು ನಿಮಿಷಗಳಾದಮೇಲೆ ಕಿಟ್ಟುವು, "ಪರವಾಗಿಲ್ಲ, ಗುರುಗಳನ್ನು ಅಲ್ಲಾಡಿಸಲು ಪ್ರಯತ್ನಮಾಡಿದ್ದೀ" ಎಂದ. ಶಾಮನು ಉತ್ತರ ಕೊಡಲಿಲ್ಲ—ಅವನಿಗೆ ಬೇಕಾಗಿದ್ದದ್ದು ತನ್ನ ಮಾತುಗಳ ಸಫಲತೆ.

ಪುನಃ ರಾತ್ರಿ ಯಥಾವಿಧಿಯಾಗಿ ಪೂಜೆ ಪುನಸ್ಕಾರ, ಮಂಗಳಾರತಿ ಆದನಂತರ ಗುರುಗಳು ತಮ್ಮ ಪರಿವಾರದೊಡನೆ ಕಿಟ್ಟುವಿನ ಮನೆಯಿಂದ ಹೊರಟರು. ಮೇನವನ್ನು ಹತ್ತುವ ಮೊದಲು ಕಿಟ್ಟುವಿನ ಜತೆಯಲ್ಲೇ ಕೈಕಟ್ಟಿಕೊಂಡು ನಿಂತಿದ್ದ ಶಾಮನ ಕಡೆ ಗುರುಗಳು ದೃಷ್ಟಿ ಬೀರಿದರು. ಶಾಮನು ತಲೆಬಾಗಿ ನಮಸ್ಕರಿಸಿದ. ಬಂದಿದ್ದ ಅತಿಥಿಗಳೆಲ್ಲಾ ರಾತ್ರಿ ಊಟ ವಾದನಂತರ ತಮ್ಮ ಮನೆಗಳಿಗೆ ತೆರಳಿದರು. ಶಾಮನು ಕಿಟ್ಟು ಮತ್ತು ಅವನ ಮನೆಯವರೊಂದಿಗೆ ವಿನೋದವಾಗಿ ಮಾತಾಡುತ್ತಾ ಊಟವನ್ನು ಮುಗಿಸಿದ. ಊಟವಾಗುವಾಗಲೂ ಕಿಟ್ಟುವಿನ ತಂದೆಯವರು ಮಧ್ಯಾಹ್ನ ಸ್ವಾಮಿಗಳು ಹೇಳಿದ ಮಾತುಗಳನ್ನೆಲ್ಲಾ ಶಾಮನಿಗೆ ತಿಳಿಸಿದರು. ಒಟ್ಟಿನಲ್ಲಿ ಅವನ ಅಭಿಪ್ರಾಯಗಳು ಸ್ವಾಮಿಗಳಿಗೆ ಮೆಚ್ಚುಗೆಯಾಯಿತೆಂಬುದೇ ಅವರ ಅಭಿಪ್ರಾಯ. ಶಾಮನು ಮಲಗಿದನಂತರ ಕಿಟ್ಟುವು ಎದ್ದು ಕುಳಿತು, ಶಾಮನು ಹೇಳಿದ ಮಾತುಗಳನ್ನೂ, ಗುರುಗಳು ಕೊಟ್ಟ ಉತ್ತರಗಳನ್ನೂ ಚಾಚೂ

ತಪ್ಪದೆ ಬರೆದು, ಮಾರನೆಯ ದಿನ ಪತ್ರಿಕೆಗಳಿಗೆ ಕಳುಹಿಸಲು ತೀರ್ಮಾನಿಸಿದ. ಬರೆಯುತ್ತಾ ಹೋದಂತೆಲ್ಲಾ ಕಿಟ್ಟುವಿಗೆ ಶಾಮನು ಎಂತಹ ಆಲೋಚನೆಗೊಳಗಾದ ಪ್ರಶ್ನೆಗಳನ್ನು ಹಾಕಿ, ಗುರುಗಳು ಸಹಜವಾಗಿ ಕೇಳಿದ ಮಾತುಗಳಿಗೆ ಪ್ರಾಕೃತವಾದ ಉತ್ತರಗಳನ್ನು ಕೊಟ್ಟಿದ್ದಾನೆನ್ನುವುದು ಚೆನ್ನಾಗಿ ಮನವರಿಕೆಯಾಯಿತು. ರಾತ್ರಿ ೧೨ ಘಂಟೆಯವರೆವಿಗೂ ಬರೆದು ಮುಗಿಸಿದ ನಂತರ ಹಾಸಿಗೆಯಮೇಲೆ ಮಲಗಿದ

ಕಿಟ್ಟು, ಶಾಮು ಊರಿಗೆ ಹೊರಡುವ ದಿನ ಪತ್ರಿಕೆಗಳಲ್ಲಿ ಶಾಮನಿಗೂ ಶ್ರೀ ಶ್ರೀ ಶ್ರೀ ಗುರುಗಳಿಗೂ ನಡೆದ ಸಂಭಾಷಣೆ ವಿಶದವಾಗಿ ಪ್ರಕಟವಾಯಿತು. ಪತ್ರಿಕೆಯೊಂದನ್ನು ತಂದು ಕಿಟ್ಟುವು ತನ್ನ ತಂದೆಗೂ ಮಿತ್ರನಿಗೂ ತೋರಿಸಿ ಉತ್ಸುಕತೆಯಿಂದ ಓದಿದ. "ಇದೆಲ್ಲಾ ಯಾತಕ್ಕೆ ಬರೆದು ಕಳುಹಿಸಿದೆಯೋ? ಓದಿದವರು ಏನಂದಾರು" ಎಂದು ಶಾಮನು ಕೇಳಲು, "ಜನರಿಗೂ ತಿಳಿಯಲಿ" ಎಂಬುದಾಗಿ ಕಿಟ್ಟುವು ಉತ್ತರ ಕೊಟ್ಟ. ಈ ಸುದ್ದಿ ಪ್ರಕಟವಾದುದರಿಂದ ಯಾವ ಫಲಿತಾಂಶವಿಲ್ಲದಿದ್ದರೂ, ಶಾಮನೆಂಬ ಒಬ್ಬ ವ್ಯಕ್ತಿ, ಧೈರ್ಯದಿಂದ ಈಗಿನ ಆವಶ್ಯಕ ಪ್ರಶ್ನೆಗಳನ್ನು ಗುರುಪೀಠದ ಮುಂದೆ ಮುಚ್ಚುಮರೆಯಿಲ್ಲದೆ ತಿಳಿಸಿದನೆಂದು ಜನರಿಗೆ ತಿಳಿದರೆ ಸಾಕು ಎನ್ನುವುದೇ ಕಿಟ್ಟುವಿನ ಆಲೋಚನೆಯಾಗಿತ್ತು. ಕೆಲವರು ಶಾಮನ ಅಭಿಪ್ರಾಯಗಳು ಸರಿ ಎಂದುಕೊಂಡರು. ಮಿಕ್ಕ ಕೆಲವು ಮುಖಸ್ತೋತ್ರದ ಗುಂಪಿನವರು, ಯಾವನೋ ತಲೆಹರಟೆಯ ಹುಡುಗ, ಭಕ್ತಿ ಗೌರವಗಳಿಲ್ಲದೆ ಮಾಡಿದ್ದಾನೆ ಎಂದು ಊಹಿಸಿದರು. ಆದರೆ ಒಂದು ವಾರದ ನಂತರ, ಗುರುಗಳು ತಾವು ಬಿಡಾರಮಾಡಿದ್ದ ಊರಿನಲ್ಲಿ ದೊರಕಬಹುದಾಗಿದ್ದ ಕಾಣಿಕೆ, ಗುರು ಸಂಭಾವನೆ ಪೈಕಿ ಮುಕ್ಕಾಲು ಭಾಗವನ್ನು ವಿದ್ಯಾರ್ಥಿ ಭವನ ಕಟ್ಟಿಸಲು ವಾಗ್ದಾನ ಮಾಡಿರುವರೆಂಬ ಸುದ್ದಿ ಪತ್ರಿಕೆಗಳಲ್ಲಿ ಒಂದುದನ್ನು ನೋಡಿ, ಶಾಮನಿಗೂ ಕಿಟ್ಟುವಿಗೂ ಅತ್ಯಂತ ಸಂತೋಷವಾಯಿತು.

ಕಿಟ್ಟುವಿಗೇನೋ ಇನ್ನೂ ೩-೪ ತಿಂಗಳು ಮದರಾಸಿನಲ್ಲೇ ಇರಬೇಕಾದ ಕಾರ್ಯವಿದ್ದುದರಿಂದ ಅವನು ತಂದೆಯ ಮನೆಯಿಂದ ಆದಷ್ಟು ಬೇಗ ಹೊರಡಬೇಕಿದ್ದಿತು. ಶಾಮನಿಗೆ ಮುಂದೇನು ಮಾಡಬೇಕೆಂಬುದೇ ಯೋಚನೆ. ತನ್ನ ಕೋಣೆಯಲ್ಲೇ ಇದ್ದು, ಸಮಾಜ, ಸೇವೆ ಎಂದು ಆದರ್ಶಗಳಿಗಾಗಿ

ಒದ್ದಾಡದೆ, ಯಾವುದಾದರೂ ಜೀವನೋಪಾಯದ ಕೆಲಸವನ್ನು ಹಿಡಿದು
ಸುಖವಾಗಿ ಉಳಿದ ಕಾಲವನ್ನು ಕಳೆಯುವುದು ಉತ್ತಮವೆಂದು ಕಿಟ್ಟುವು
ಒತ್ತಾಯ ಮಾಡಿದರೂ ಶಾಮುನ ಮನಸ್ಸು ಪೂರ್ತಿಯಾಗಿ ಒಪ್ಪಲಿಲ್ಲ.
ಆದರೆ ಮುಂದೆ ಎಲ್ಲಿ ಹೋಗಲೂ ದಾರಿಯಿಲ್ಲವಾದುದರಿಂದ, ಮಿತ್ರನೊಡನೆ
ತಾನೂ ಮದರಾಸಿಗೆ ಹಿಂದಿರುಗುವ ಏರ್ಪಾಡನ್ನು ಮಾಡಿದ. ಕಿಟ್ಟುವಿನ
ಮನೆಯವರು ಹುಡುಗರಿಬ್ಬರಿಗೂ ಭಾರಿ ಔತಣವನ್ನೇರ್ಪಡಿಸಿ, ಸಂತೋಷ
ಪಡಿಸಿದರು. ತಮ್ಮ ಮಗನು ನಿಜವಾಗಿಯೂ ಮೇಧಾವಿಯಾದ ಸ್ನೇಹಿತನನ್ನು
ಪಡೆದಿರುವನೆಂದು ಕಿಟ್ಟುವಿನ ತಂದೆಗೆ ತೋರಿ, ಅದನ್ನು ಅವರು ಗೋಪ್ಯ
ವಾಗಿಡದೆ, ಎಲ್ಲರಿಗೂ ತಿಳಿಸಿದರು.

ಮದರಾಸಿಗೆ ಬಂದನಂತರ ಎಂದಿನಂತೆ ನಿತ್ಯಜೀವನ ಪ್ರಾರಂಭವಾಯಿತು.
ಕಿಟ್ಟುವು ಮಿತ್ರನಿಗೆ ಯಾವ ಯೋಚನೆಯೂ ಬಾರದಂತೆ ಎಲ್ಲಾ ವಿಧದಲ್ಲೂ
ಚೆನ್ನಾಗಿ ನೋಡಿಕೊಳ್ಳುತ್ತಿದ್ದರೂ, ಶಾಮುನಿಗೆ ಒಂದು ವಾರ ಕಳೆಯುವುದ
ರೊಳಗೆ ಮನಸ್ಸು ಸಂಕೋಚಪಡಲು ಮೊದಲಾಯಿತು. ಪ್ರತಿಯಾಗಿ ಯಾವ
ಉಪಕಾರವನ್ನೂ ಮಾಡಲಾಗದ ತಾನು ಕಿಟ್ಟುವಿನ ಆತಿಥ್ಯವನ್ನು ಎಷ್ಟು
ದಿನ ಒಪ್ಪುವುದು ಎನ್ನುವುದೇ ಅವನ ಸಂಕೋಚ ಮನಸ್ಸಿಗೆ ಕಾರಣವೆಂದು
ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ—ಆತ್ಮಾಭಿಮಾನವುಳ್ಳವರೇ ಹೀಗೆ. ಆದರೆ
ಶಾಮುನ ಒಳತೋಟಿಯನ್ನು ಅವನ ಮಿತ್ರನು ಗಮನಿಸದಿರಲಿಲ್ಲ. ಎಷ್ಟು
ಸಮಾಧಾನ ಮಾಡಿದರೆ ತಾನೆ ಶಾಮುನ ಹೃದಯವು ಆಲೋಚನೆಯನ್ನು
ಬಿಟ್ಟೀತು. ತನ್ನ ಮುಂದಿನ ಬಾಳು ಶೂನ್ಯವಾಗಿ ಕಾಣುತ್ತಿದ್ದುದರಿಂದ ಜೀವನ
ಕ್ಕಾದರೂ ಮಾರ್ಗವನ್ನು ಕಲ್ಪಿಸಿಕೊಳ್ಳಬೇಕೆಂದು ಶಾಮುನಿಗೆ ಪದೇ ಪದೇ
ಅವನ ಮನಸ್ಸು, ಹೃದಯ ಒತ್ತಿ ಹೇಳಿತು. ಒಬ್ಬ ಮಿತ್ರನ ಆದರವನ್ನು
ಮಿತಿಮೀರಿ ಉಪಯೋಗಿಸಿಕೊಳ್ಳುವುದಕ್ಕಿಂತ ದುಡಿದು, ಜೀವನ ಮಾಡು
ವುದೇ ಸರಿ ಎಂದು ಅವನಿಗೆ ತೋರಿದ್ದು ಸಹಜವೇ ಹೌದು. ಮನುಷ್ಯನಾಗಿ
ಹುಟ್ಟಿದವನು ತನ್ನ ಬೆವರಿನಿಂದ ತಾನು ಜೀವಿಸಬೇಕೆಂಬುದು ಪ್ರಪಂಚದ
ನಿಯಮವಾದರೂ, ದುಡಿಯಲು ಒಂದು ರೀತಿ, ಮಾರ್ಗ, ದಾರಿ ಅತ್ಯಾವಶ್ಯಕ.
ಕೆಲಸಮಾಡಿ ಸಂಪಾದಿಸಬೇಕೆನ್ನುವುದು ಶಾಮುನಿಗೆ ಚೆನ್ನಾಗಿ ಅರ್ಥವಾಗಿ

ದ್ದರೂ, ದಾರಿ ಕಾಣದೆ ಕಿಟ್ಟುವಿನ ಕೋಣೆಯಲ್ಲಿರಬೇಕಾದ ತನ್ನ ಸ್ಥಿತಿಗೆ ತಾನೇ ಮರಗುತ್ತಿದ್ದ. ಶಾಮನ ಮನಸ್ಸನ್ನು ಅರಿತಿದ್ದ ಕಿಟ್ಟುವು ಯಾವುದಾದರೂ ಸೂಕ್ತ ಕೆಲಸವನ್ನು ಹುಡುಕಬೇಕೆಂದು ಯೋಚನೆ ಬಂದಾಗಲೆಲ್ಲಾ ಅವನ ಹಿಂದಿನ ನಡೆವಳಿಕೆಗಳೂ, ಸಮಾಜ ಸೇವೆ, ದೇಶಸೇವೆ, ಜನಸೇವೆ ಮಾಡಬೇಕೆಂಬ ಹೆಬ್ಬಯಿಕೆಯೂ ಜ್ಞಾಪಕಕ್ಕೆ ಬರುತ್ತಿತ್ತು. ತನ್ನ ಆತಿಥ್ಯವನ್ನು ಸ್ವೀಕರಿಸಿದರೆ ಸ್ನೇಹವನ್ನು ಅತಿಯಾಗಿ ಉಪಯೋಗಿಸಿದಂತೆ ಆಗುವುದೆಂದು ಭಾವಿಸಿ ಎಲ್ಲಿ ಶಾಮನು ಪುನಃ ಹೊರಟುಹೋಗಿ ಕಷ್ಟಪಡುವನೋ ಎಂದು ಕಿಟ್ಟುವು ತನ್ನ ವಿರಾಮ ಕಾಲದಲ್ಲೆಲ್ಲಾ ಮಿತ್ರನಿಗೆ ಸರಿಯಾದ ಕೆಲಸವು ದೊರಕುವುದೇ ಎಂದು ತನ್ನ ಪರಿಚಿತಿಯಿರುವವರನ್ನು ವಿಚಾರಿಸಲು ಪ್ರಾರಂಭಿಸಿದ. ದಿನಗಳು ಉರುಳಿತೇ ವಿನಹ ಕಿಟ್ಟುವಿನ ಮನಸ್ಸಿಗೆ ಸರಿಯಾದ ಯಾವ ದಾರಿಯೂ ಕಾಣಲಿಲ್ಲ. ಸುಮಾರು ೧೫ ದಿನಗಳ ನಂತರ ಕಿಟ್ಟುವಿನ ಮಿತ್ರನಾದ ಸಾಹಿತಿಯೊಬ್ಬನು, ತಮ್ಮ ಸಾಹಿತ್ಯ ಸಂಘದಲ್ಲಿ ಒಂದು ಕೆಲಸವು ಖಾಲಿಯಿದೆಯೆಂದು ತಿಳಿಸಿದ. ಅದಕ್ಕೆ ಸಾಹಿತ್ಯದಲ್ಲಿ ತಕ್ಕಮಟ್ಟಿಗೆ ಪರಿಶ್ರಮವಿರುವವರೂ, ಸೇವೆಯ ಧ್ಯೇಯವುಳ್ಳವರೂ ಬೇಕಾಗಿದ್ದಿತು. ಬಹುಶಃ ಶಾಮನು ಇದಕ್ಕೆ ಒಪ್ಪಬಹುದೆಂದು ಮನಸ್ಸಿನಲ್ಲಿಯೇ ಭಾವಿಸಿ, ಸಂಘದ ಅಧ್ಯಕ್ಷರನ್ನು ಕಂಡು ತನ್ನ ಮಿತ್ರನ ವಿಷಯವಾಗಿ ಮಾತಾಡಿದ. ಸಂಘದ ಅಧ್ಯಕ್ಷರೂ ಶಾಮನ ವಿಷಯವನ್ನು ಪತ್ರಿಕೆಗಳ ಮೂಲಕ ತಿಳಿದಿದ್ದರು. ಆದ್ದರಿಂದ ಮೂವತ್ತು ರೂಪಾಯಿನ ತಲಬಿನಮೇಲೆ ಸಂಘದ ಮೇಲ್ವಿಚಾರಕನಾಗಿ ಅವನನ್ನು ನೇಮಿಸಿಕೊಳ್ಳಲು ತಕ್ಷಣವೇ ಸಮ್ಮತಿಸಿದರು. ಕಿಟ್ಟುವು ಸಂತೋಷದಿಂದ ಮಿತ್ರನಿಗೆ ಈ ಸಮಾಚಾರವನ್ನು ತಿಳಿಸಲು, ಶಾಮನು ನಗುತ್ತಾ "ಅಲ್ಲಯ್ಯಾ ಒಳ್ಳೆ ಕೆಲಸಾನೆ ಸಂಪಾದಿಸಿದೆ. ನನಗೆ ಸಾಹಿತ್ಯದಲ್ಲಿ ಜ್ಞಾನವೇನಿದೆ? ಆ ಸರಸ್ವತೀ ಪ್ರಸನ್ನರೊಂದಿಗೆ ಮಾತಾಡಲು, ಕೂರಲು, ನನಗೆ ಯೋಗ್ಯತೆ ಬೇಡವೇ" ಎಂದು ಪ್ರಶ್ನಿಸಿದ. ಕಿಟ್ಟುವು "ಸಾಹಿತ್ಯ ಅಂದರೆ ಕೇವಲ ಬರೆವಣಿಗೆಗೆ ಸೇರಿದ್ದು ಮಾತ್ರವಲ್ಲ. ನಿನ್ನ ಧ್ಯೇಯ, ಜೀವನ ಸಹಾ ಸಾಹಿತ್ಯ. ಆದ್ದರಿಂದ ನೀನು ಒಪ್ಪುವುದರಲ್ಲಿ ಬಾಧಕವಿಲ್ಲ" ಎಂದು ಹೇಳಿದ ಮೇಲೆ ಶಾಮನು ಈ ಕೆಲಸವನ್ನೂ ನೋಡಿಬಿಡೋಣವೆಂದು ಮಿತ್ರನ ಮಾತಿಗೆ ಹೂಗುಟ್ಟಿದ.

೩

ಮೂರನೆಯ ದಿವಸ ಕಿಟ್ಟುವೇ ಶಾಮುನನ್ನು ಕರೆದುಕೊಂಡುಹೋಗಿ ಅಧ್ಯಕ್ಷರ ಭೆಟ್ಟಿಮಾಡಿಸಿದ. ಶಾಮನ ರೀತಿ, ಮಾತು, ನೋಡಿ ಕೇಳಿದ ಅಧ್ಯಕ್ಷರು ಸಂತಸಪಟ್ಟರು. ಮುಂದಿನ ತಿಂಗಳ ಮೊದಲನೆಯ ತಾರೀಖು ಕೇವಲ ಮೂರು ದಿನಗಳು ಮುಂದಿದ್ದುದರಿಂದ ಆ ದಿನ ಕೆಲಸಕ್ಕೆ ಬರಬಹುದೆಂದು ಅಧ್ಯಕ್ಷರು ತಿಳಿಸಿದರು. ಶಾಮುನಿಗೂ ಮನಸ್ಸು ಸ್ವಲ್ಪ ಹಗುರಾಯಿತು. ದೊಡ್ಡ ಸಾಹಿತಿಗಳ ಜತೆಯಲ್ಲಿರುವ ಸನ್ನಿವೇಶ ದೊರೆತುದಕ್ಕಾಗಿ ಮನಸ್ಸಿನಲ್ಲೇ ಹೆಮ್ಮೆಪಟ್ಟು ಕಿಟ್ಟುವನ್ನು ವಂದಿಸಿದ.

ಸಾಹಿತ್ಯ ಸಂಘಕ್ಕೆ ಅನೇಕ ಸದಸ್ಯರಿದ್ದರು. ಸಾಹಿತ್ಯಾಭಿವೃದ್ಧಿ, ಜನರಿಗೆ ಉತ್ತಮ ಸಾಹಿತ್ಯದ ಸವಿತೋರಿಸುವುದು, ಅಕ್ಷರಾಭ್ಯಾಸ, ಹಳ್ಳಿಯ ಜನರಲ್ಲಿ ಪ್ರಚಾರ, ಕನ್ನಡಿಗರನ್ನು ಒಟ್ಟುಗೂಡಿಸುವುದು—ಇವೇ ಸಂಘದ ಮುಖ್ಯ ಉದ್ದೇಶಗಳು. ಶಾಮುನು ಮೊದಲನೆಯ ತಾರೀಖು ಬೆಳಗ್ಗೆ ಸಂಘದ ಕಚೇರಿಗೆ ಹೋದೊಡನೆ ಅವನಿಗೆ ಕಾಣಿಸಿದ್ದು, ಅನೇಕ ಉತ್ತಮ ಸಾಹಿತಿಗಳ ಚಿತ್ರಗಳಿಂದ ಅಲಂಕೃತವಾದ ಒಂದು ಭವ್ಯ ಪಡಸಾಲೆ, ಮತ್ತು ಅನೇಕ ಗ್ರಂಥಗಳನ್ನೊಳಗೊಂಡಿದ್ದ ಕೆಲವು ಬೀರುಗಳೂ, ಮಧ್ಯದಲ್ಲಿ ಕುರ್ಚಿಯೊಂದರಮೇಲೆ ಕುಳಿತಿದ್ದ ಅಧ್ಯಕ್ಷರೂ, ಮತ್ತು ಇತರರೂ ಅಧ್ಯಕ್ಷರಿಗೆ ವಂದಿಸಿ ಶಾಮುನು ಅಲ್ಲಿಯೇ ನಿಂತುಕೊಂಡ. ಅವರು ತಮ್ಮ ಬಳಿಯಿದ್ದ ಇತರ ಸಾಹಿತಿಗಳಿಗೂ ಶಾಮುನ ಪರಿಚಯ ಮಾಡಿಕೊಟ್ಟು, ಕೆಲಸದ ವಿವರವನ್ನು ಒಂದೆರಡು ಮಾತಿನಲ್ಲಿ ತಿಳಿಸಿದರು. ಹೆಚ್ಚು ಮಾತಾಡದೆ ಶಾಮುನು ಅಲ್ಲಿ ಮಾಡಬೇಕಾಗಿದ್ದ ಕಾರ್ಯಗಳನ್ನು ಪರಿಶೀಲಿಸತೊಡಗಿದ. ಬೆಳಗ್ಗೆ ೮ ಘಂಟೆಯ ಹೊತ್ತಿಗೆ ಕಚೇರಿಗೆ ಹೋಗುವುದು, ಅಂದಿನ ಟಪಾಲು ನೋಡಿ ಅಧ್ಯಕ್ಷರ ಬಳಿಗೆ ಕಳುಹಿಸುವುದೂ, ಉತ್ತರ ಬರೆಯುವುದೂ, ಲೆಕ್ಕಪತ್ರಗಳನ್ನು ಸರಿಯಾಗಿಡುವುದೂ ಸಂಘದ ಇತರ ಎಲ್ಲಾ ಕಾರ್ಯಕಲಾಪಗಳನ್ನು ಮೇಲ್ವಿಚಾರಕನಾಗಿ ಏರ್ಪಡಿಸುವುದೂ, ಇವೇ ಮೊದಲಾದ ಅನೇಕ ಕೆಲಸಗಳು ಸಂಜೆ ೫ ಘಂಟೆಯವರೆಗೆ ನಡೆಯುತ್ತಿತ್ತು. ವಾರಕ್ಕೆ ಎರಡು ಮೂರು ದಿನ ಸಾಹಿತಿಗಳಿಂದ ಉಪನ್ಯಾಸ, ವಾಚನ, ಇತ್ಯಾದಿ ವಿಶೇಷಗಳು ನಡೆಯುತ್ತಿದ್ದುದರಿಂದ ಶಾಮುನು ರಾತ್ರಿ ೯ ಘಂಟೆಯವರೆಗೂ ಅಲ್ಲಿಯೇ ಇದ್ದು ಎಲ್ಲವನ್ನು ನಡೆಸ

ಬೇಕಾಗಿದ್ದಿತು. ವಿರಾಮವಿಲ್ಲದೆ ಕೆಲಸ ಮಾಡಬೇಕಾಗಿದ್ದರೂ ಶಾಮನಿಗೆ ಅದರಲ್ಲಿ ಕೇವಲ ಒಂದು ವಾರ ಕಳೆಯುವುದರೊಳಗೆ ಹುರುಪು ಬಂದಿತು. ಅಧ್ಯಕ್ಷರ ಮತ್ತು ಇತರರ ಪ್ರೀತಿಗೆ ಪಾತ್ರನಾಗುವಂತೆ ತನ್ನ ಕಾರ್ಯವನ್ನು ಉತ್ಸುಕತೆಯಿಂದ ನಿರ್ವಹಿಸತೊಡಗಿದ. ಸಂಘದ ಆಶ್ರಯದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಗಳು ಕೇವಲ ಸಂಘದ ವಿಷಯವನ್ನೂ, ಅಧ್ಯಕ್ಷರ ಸಮಾಚಾರವನ್ನೂ ಕುರಿತು ಬೆಳಕನ್ನು ಕಾಣುತ್ತಿತ್ತು. ಶಾಮನು ಅವುಗಳಲ್ಲಿ ವಿಚಾರಪೂರಿತ ಲೇಖನಗಳಿಗೂ ಎಡೆಯಿರಬೇಕೆಂದು ಅಧ್ಯಕ್ಷರಿಗೆ ತಿಳಿಸಿದ. ಅವನ ಸೂಚನೆಗೆ ಅವರು ಮೆಚ್ಚಿ ಆದಷ್ಟು ಬೇಗ ಆ ಮಾರ್ಪಾಟನ್ನು ಕಾರ್ಯರೂಪಕ್ಕೆ ತರುವುದಾಗಿ ಭರವಸೆಯಿತ್ತರು. ಕೇವಲ ನಾಲ್ಕೈದು ಸಾಹಿತಿಗಳು ಮಾತ್ರ ಆ ಪತ್ರಿಕೆಗಳಿಗೆ ಬರೆಯುತ್ತಿದ್ದರು ಬರೆವಣಿಗೆ ಒಬ್ಬಿಬ್ಬರ ಸ್ವತ್ತಲ್ಲವೆಂದು ಶಾಮನು ಕರ್ನಾಟಕದ ಲೇಖಕರೆಲ್ಲರಿಂದ ಕಥೆ, ಕಾವ್ಯ, ನಾಟಕ, ಮುಂತಾದುವನ್ನು ತರಿಸಬೇಕೆಂದೂ, ಪತ್ರಿಕೆಗಳು ಸರ್ವಾಂಗಸುಂದರವಾಗಿರಬೇಕೆಂದೂ ಅಭಿಪ್ರಾಯಪಟ್ಟು ಸಂಘದ ಕಾರ್ಯಕಾರಿ ಮಂಡಲಿಗೆ ಸಲಹೆಗಳನ್ನು ಕೊಡಲಾರಂಭಿಸಿದ. ಈ ಮಧ್ಯೆ ವಿರಾಮವಾದಾಗ ಕುಳಿತು, "ಸಾಹಿತ್ಯ—ಸೇವೆ," "ಸಾಹಿತಿಗಳ ದರ್ಶನ," "ಸಾಹಿತ್ಯವೆಂದರೇನು" ಎಂಬ ವಿಚಾರಪೂರಿತ ಲೇಖನಗಳನ್ನು ಬರೆದು ಅಧ್ಯಕ್ಷರಿಗೂ ಇತರರಿಗೂ ಹೆಮ್ಮೆಯಿಂದ ತೋರಿಸಿದ. ಹೀಗೆಯೇ ಹುಮ್ಮಸ್ಸಿನಿಂದ ಶಾಮನ ಕೆಲಸ ೧೫ ದಿನ ನಡೆಯಿತು. ನಂತರ ಒಂದು ದಿನ ಅಧ್ಯಕ್ಷರು ಬಂದು ತಾವು ಹೊಸದಾಗಿ ಬರೆದಿದ್ದ ಕಾದಂಬರಿಯ ಹಸ್ತಪತ್ರಿಕೆಯನ್ನು ಮಾಡಿಕೊಡಲು ಶಾಮನಿಗೆ ಕೊಟ್ಟರು ಶಾಮನು ಮರುಮಾತಾಡದೆ ಮೂರು ದಿನ ವಿಶ್ರಾಂತಿ ಎಂಬ ಮಾತನ್ನು ಸಹಾ ತ್ಯಜಿಸಿ, ಹಸ್ತಪ್ರತಿಯನ್ನು ಮಾಡಿ ಒಪ್ಪಿಸಿದ. ಅವನು ೧೫ ದಿನಗಳ ಹಿಂದೆ ಕೊಟ್ಟಿದ್ದ ಸಲಹೆಗಳೂ ಸೂಚನೆಗಳೂ ಯಾವುವೂ ಕಾರ್ಯರೂಪಕ್ಕೆ ಬರುವಂತೆ ಅವನಿಗೆ ತೋರಲಿಲ್ಲ ಒಂದೊಂದಾಗಿ ಅಧ್ಯಕ್ಷರ ಮತ್ತು ಅವರಿಗೆ ಬೇಕಾದ ಮತ್ತಿತರರ ಸ್ವಂತ ಕೆಲಸಗಳು ಅವನ ಪಾಲಿಗೆ ಬರಲಾರಂಭವಾಯಿತು. ಸಂಘದ ಸದಸ್ಯರ ಸಂಖ್ಯೆ ವಿಪರೀತವಾಗಿದ್ದು, ಚಂದಾ ವಸೂಲಿ, ಅವರೊಡನೆ ಪತ್ರವ್ಯವಹಾರ ಇವುಗಳಲ್ಲೇ ಹೊತ್ತು ಮುಗಿಯುತ್ತಿದ್ದುದರಿಂದ ಅಧ್ಯಕ್ಷರ ಸ್ವಂತ ಕೆಲಸಗಳು ಸ್ವಲ್ಪ ಅಡಚಣೆಯನ್ನೇ ಮಾಡಿತು.

ಆದರೂ ಜ್ಞಾನಾಭಿವೃದ್ಧಿಗೆ ಮಾರ್ಗವಿದ್ದುದರಿಂದ ಶಾಮನು ಅವುಗಳಿಂದುಂಟಾಗುವ ತೊಂದರೆಯನ್ನು ಹೆಚ್ಚು ಗಮನಿಸುತ್ತಿರಲಿಲ್ಲ ಒಂದು ತಿಂಗಳು ಕಳೆಯುವುದರೊಳಗೆ ಪತ್ರಿಕೆ ಪ್ರಕಟಣದ ಕಾರ್ಯವು ಸಂಪೂರ್ಣವಾಗಿ ಅವನ ಪಾಲಿಗೆ ಬಿದ್ದಿತು—ಆದರೆ ಲೇಖನಗಳ ಬಗ್ಗೆ ಅವನಿಗೆ ಸ್ವಾತಂತ್ರ್ಯ ಸಿಗಲಿಲ್ಲ. ಸಂಪಾದಕರು ಸೂಚಿಸುವಂತೆ ಮಾಡಬೇಕಾಗಿದ್ದಿತು. ಕೆಲಸವು ಹೆಚ್ಚಾಗಿ ವಿರಾಮವಿಲ್ಲದಂತೆ ಆದಹಾಗೆಲ್ಲಾ ಶಾಮನಿಗೆ ಈ ಸಂಘದಿಂದ ಜನರಿಗೆ ಏನು ಉಪಯೋಗವಾಗುತ್ತಿದೆ ಎಂಬ ಪ್ರಶ್ನೆ ಮನಸ್ಸಿಗೆ ಬರುತ್ತಿತ್ತು. ಯೋಚಿಸಿದಷ್ಟೂ ಅವನಿಗೆ ಉತ್ತರವು ಸಿಗಲಿಲ್ಲ. 'ಪ್ರಶ್ನೆ ಕೇಳುವುದೇನೋ ಸುಲಭ, ಉತ್ತರ ಬರುವುದು ಮಾತ್ರ ಕಷ್ಟ' ಎಂದು ಭಾವಿಸಿ, ತನ್ನ ದಿನಚರಿಯನ್ನು ತಪ್ಪಿಸದೆ ಶಾಮನು ಕೆಲಸಕ್ಕೆ ಹೋಗುತ್ತಿದ್ದ. ಕಿಟ್ಟುವಿನೊಡನೆ ಒಂದೇ ಕೋಣೆಯಲ್ಲಿದ್ದರೂ ಶಾಮನಿಗೆ ಅವನ ಭೇಟಿಯಾಗುವುದೇ ಕಷ್ಟವಾಗುತ್ತಿತ್ತು. ಆದರೆ ಶಾಮನು ವಿರಾಮವಿಲ್ಲದೆ ದುಡಿಯುವುದನ್ನು ನೋಡಿ ಅವನ ಮಿತ್ರನಿಗೆ ಮಾತ್ರ ಕೊನೆಗೂ ಮನಸ್ಸಿಗೊಪ್ಪುವ ಕೆಲಸ ಸಿಕ್ಕಿತಲ್ಲಾ ಎಂದು ಸಮಾಧಾನವಾಗುತ್ತಿತ್ತು. ಒಂದು ವಿಧದಲ್ಲಿ ಶಾಮನು ತನ್ನ ಕೆಲಸದಿಂದ ಪ್ರಯೋಜನವನ್ನು ಅಮಿತವಾಗಿ ಪಡೆಯುತ್ತಿದ್ದ. ಸಂಘದ ಭಂಡಾರದಲ್ಲಿದ್ದ ಅನೇಕ ಪುಸ್ತಕಗಳನ್ನೂ ಗ್ರಂಥಗಳನ್ನೂ ಇತರರು ಮುಟ್ಟದಿದ್ದರೂ ಒಂದೊಂದಾಗಿ ಅವುಗಳಲ್ಲಿನ ತಿರುಳನ್ನು ನೋಡಲು ಶಾಮನು ಪ್ರಯತ್ನಿಸಿದ ತನ್ನ ಕೆಲಸದ ಜತೆಯಲ್ಲೇ ಯಾವುದಾದರೂ ಗ್ರಂಥವನ್ನು ನೋಡುವುದು ಅವನ ದಿನಚರಿಯಾಯಿತು. ಅಧ್ಯಕ್ಷರೂ ಮತ್ತು ಇತರ ಅವನ ಮಿತ್ರರೂ ಸಂಘಕ್ಕೆ ಬಂದಾಗ ಅವರ ಮಾತೂ ಚರ್ಚೆಗಳೂ ರುಚಿಸುವುದರ ಬದಲು, ಶಾಮನಿಗೆ ಬೇಸರವನ್ನುಂಟುಮಾಡುತ್ತಿದ್ದುದರಿಂದ ಗ್ರಂಥಾವಲೋಕನದ ಕೆಲಸ ಸುಸೂತ್ರವಾಗಿ ಸಾಗಿತ್ತು. ಹೊಸದರಲ್ಲಿ ಒಂದೆರಡು ಬಾರಿ ಅಲ್ಲಿಗೆ ಬರುವ ಸಾಹಿತಿಗಳ ಜತೆಯಲ್ಲಿ ಬೆರೆತು, ಅವರ ಮಾತು ಕಥೆ ಕೇಳಬೇಕೆಂದು ಕುತೂಹಲದಿಂದ ಪ್ರಯತ್ನಿಸಿದ್ದ. ಆದರೆ ಅವರಲ್ಲಿ ಮುಕ್ಕಾಲುಪಾಲು ಜನ ಸ್ವಪ್ರತಿಷ್ಠೆಯಲ್ಲೂ ಇತರರ ನಿಂದೆಯಲ್ಲೂ ಮಾತಿನ ಸುರಿಮಳೆಯನ್ನು ಹರಿಸುತ್ತಿದ್ದುದರಿಂದ ಶಾಮನಿಗೆ ಸ್ವಲ್ಪ ದಿನಗಳಲ್ಲಿಯೇ ಬೇಸರವುಂಟಾಯಿತು. ಸಂಸ್ಕೃತಿಯ ಸಾನ್ನಿಧ್ಯದಲ್ಲೂ ಜಾತಿ, ಮತ, ಕುಲ, ಗೋತ್ರ ಎಂಬ ಭೇದಭಾವಗಳನ್ನು ಕಂಡ

ಮೇಲಂತೂ ಅವನ ಮನಸ್ಸಿಗಾದ ಜಿಗುಪ್ಸೆಯನ್ನು ಹೇಳಲಾಸಲ್ಲ. ಆ ಜನರು ಅಲ್ಲಿಗೇಕೆ ಬರುವರೆಂದೂ, ಒಂದೊಂದು ಸಾರಿ ಶಾಮನ ಮನಸ್ಸು ಕೇಳುತ್ತಿತ್ತು. ಬೇರೆ ಏನೂ ಕೆಲಸವಿಲ್ಲದುದರಿಂದಲೂ, ಅನಾಯಾಸವಾಗಿ ಫಲಾಹಾರವು ಒದಗುವುದರಿಂದಲೂ ಬರುತ್ತಾರೆಂಬುದು ನೋಡಿದ್ದ ವಿಷಯವೇ ಹೌದು. ಯಾರ ಬುದ್ಧಿ, ಧೈರ್ಯ, ಮಾತು ಕಥೆಗಳು ಹೇಗಿದ್ದರೂ, ಅದರ ಕಡೆ ಗಮನ ಕೊಡದೆ, ಸುಮಾರು ೨ ತಿಂಗಳು ಕೆಲಸ ಮಾಡಿದ. ನಂತರ ಒಂದು ದಿನ ಅಧ್ಯಕ್ಷರು ಕಚೇರಿಗೆ ಬಂದು, ಮುಂದಿನ ವಾರ ಯಾವುದೋ ಹಳ್ಳಿಗೆ ಸಾಹಿತ್ಯ ಪ್ರಚಾರಕ್ಕಾಗಿ ಹೋಗಬೇಕೆಂದೂ, ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಬೇಕೆಂದೂ ತಿಳಿಸಿದರು. ಸಂಘದಲ್ಲಿ ಹೇರಳ ಹಣವಿದ್ದುದರಿಂದ ಶಾಮನು ಹಿಂದು ಮುಂದು ನೋಡದೆ ಏರ್ಪಾಡುಗಳಲ್ಲಿ ತೊಡಗಿದ. ಸುಮಾರು ೨೫ ಜನ ಸಾಹಿತಿಗಳು ೨೦೦ ಮೈಲು ದೂರವಿದ್ದ ಹಳ್ಳಿಯೊಂದರಲ್ಲಿ ಮೂರು ದಿನ ಸಾಹಿತ್ಯ ಪ್ರಚಾರ ಮಾಡಬೇಕೆಂದು ನಿರ್ಧರಿಸಲ್ಪಟ್ಟಿತ್ತು. ಅವರು ಹೊರಡುವ ದಿನ, ದಾರಿ ಮತ್ತು ಮಾಡುವ ಉಪನ್ಯಾಸ, ಆಡುವ ನಾಟಕ, ಇತ್ಯಾದಿ ವಿವರಗಳಿಗಾಗಿಯೂ ಸಂಘದ ಪತ್ರಿಕೆಯು ವಿಶೇಷವಾಗಿ ಪ್ರಕಟವಾಯಿತು. ಆ ಹಳ್ಳಿಯವರು ಕೂಡ, ತಮ್ಮಲ್ಲಿಗೆ ಇಷ್ಟು ವಿದ್ವನ್ಮಣಿಗಳು ಏಕ ಕಾಲದಲ್ಲಿ ಬರುವುದು ಏನೋ ಮಹತ್ಕಾರ್ಯಕ್ಕೆಂದು ಭಾವಿಸಿ, ಉತ್ಸಾಹಗೊಂಡಿದ್ದಾರೆಂದು ಅಲ್ಲಿನ ಶಾನುಭೋಗರ ಪತ್ರವೂ ಅಧ್ಯಕ್ಷರ ಕೈಸೇರಿತು. ಶಾಮನೂ ಮೇಲ್ವಿಚಾರಕನಾಗಿ ಪ್ರಯಾಣಮಾಡದೆ ಗತ್ಯಂತರವಿರಲಿಲ್ಲ. ಕಿಟ್ಟುವಿಗೆ ಈ ಸಂತಸದ ಸುದ್ದಿಯನ್ನು ತಿಳಿಸಿ, ಪ್ರಯಾಣಕ್ಕಾಗಿಯೇ ಏರ್ಪಡಿಸಿದ್ದ ಬಸ್ಸಿನಲ್ಲಿ ತಾನೂ ಹೊರಟ. ಅಧ್ಯಕ್ಷರು ತಮಾಷೆಯಾಗಿ ಮಾತಾಡಿಕೊಂಡು, ಮಧ್ಯೆ ಮಧ್ಯೆ ತಂದಿದ್ದ ಬುತ್ತಿಯನ್ನು ಬಿಚ್ಚಿ ತಿಂಡಿ ತಿನ್ನುತ್ತಾ, ಹರಟೆಯಲ್ಲಿ ೨೦೦ ಮೈಲುಗಳನ್ನು ಬಹು ಬೇಗ ಕಳೆಸಿದರು. ಸಾಹಿತಿವೃಂದವು ಹಳ್ಳಿಯ ಸಮೀಪಕ್ಕೆ ಬರುವಷ್ಟರಲ್ಲಿಯೇ ಶಾನುಭೋಗರು ಪರಿವಾರದೊಡನೆ ಎದುರ್ಗೊಂಡು, ಹಾರ ಹಾಕಿ, ಬಾಜಾಬಜಂತ್ರಿಯೊಡನೆ ಮೆರವಣಿಗೆಯ ಮೂಲಕ ಎಲ್ಲರನ್ನೂ ಶಾಲೆಯ ಕಟ್ಟಡಕ್ಕೆ ಕರೆದುಕೊಂಡುಹೋದರು. ಆ ಕಟ್ಟಡವೇ ಉಳಿದುಕೊಳ್ಳಲು ಮೀಸಲಾಗಿತ್ತು. ಬಂದವರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳಲು ಖುದ್ದು ಶಾನುಭೋಗರೇ ನಿಂತಿದ್ದರು. ಎಲ್ಲರೂ ಶಾಲೆಯೊಳಗೆ

ಹೋದಮೇಲೆ ಕೋಸಂಬರಿ, ಪಾನಕ, ಎಳನೀರು, ಮುಂತಾದ ಫಲಾಹಾರ ಪಾನೀಯಗಳ ಸಂಭ್ರಮ ನಡೆದು, ಊಟದ ಹೊತ್ತಿನವರಿಗೂ ಸಾಹಿತಿ ಮಂಡಲಿಯು ವಿಶ್ರಮಿಸಿಕೊಳ್ಳಬೇಕೆಂದು ಶಾನುಭೋಗರ ಸಲಹೆಯಂತೆ, ತಂದಿದ್ದ ಹಾಸಿಗೆಗಳನ್ನು ಬಿಚ್ಚಲು ಪ್ರಯತ್ನಿಸಿದರು. ಶಾಮನಿಗೆ ವಿಶ್ರಾಂತಿ ಯೇನೂ ಬೇಕಿರಲಿಲ್ಲ. ಹಳ್ಳಿಯ ಜನಜೀವನವನ್ನು ನೋಡಿ, ಪರಿಚಿತಿಮಾಡಿ ಕೊಳ್ಳಬೇಕೆಂಬ ಹಂಬಲದಿಂದ ಸುತ್ತಾಡಿಬರಲು ಹೊರಗೆ ಹೆಜ್ಜೆ ಹಾಕಿದ. ಹಳ್ಳಿಗೆ ಯಾರೋ ಹೊಸಬರು ಬಂದಿರುವರೆಂಬ ವಾರ್ತೆ ಬಹು ಬೇಗನೆ ಹಬ್ಬಿದ್ದುದರಿಂದ, ಮಕ್ಕಳು, ಹೆಂಗಸರು, ಮುದುಕರು, ಮೊದಲಾಗಿ ಎಲ್ಲರೂ ಶಾಲೆಯ ಕಡೆ ಧಾವಿಸುತ್ತಿದ್ದರು. ಶಾಮನು ಒಂದೆರಡು ನಿಮಿಷದಲ್ಲೇ ಹಳ್ಳಿ ಯಲ್ಲಿದ್ದ ಮುಖ್ಯ ಬೀದಿಗಳನ್ನು ಸುತ್ತಿ ಬಂದ. ದಾರಿಯಲ್ಲಿ ಸಿಕ್ಕ ಕೆಲವರನ್ನು ಮಾತಾಡಿಸಿದುದಕ್ಕೆ, ಸಾಹಿತಿಗಳ ಆಗಮನಕ್ಕೆ ಕಾರಣರಾರು, ಅವರನ್ನು ಬರಮಾಡಿಕೊಂಡಿರುವ ಉದ್ದಿಶ್ಯವೇನು, ಎನ್ನುವುದು ತಿಳಿಯಿತು. ಊರಿ ನಲ್ಲೆಲ್ಲಾ ಶಾನುಭೋಗರದೇ ಮೇಲುಕೈ. ಅವರಿಗೆ ಎದುರು ನುಡಿಯುವವರು ಅತಿವಿರಳ. ಅವರ ಹಟವೇ ಸಾಧಿಸಲ್ಪಡುತ್ತಿತ್ತು. ಒಂದು ವೇಳೆ ಯಾರಾ ದರೂ ಹೀಗಲ್ಲಾ ಹಾಗೆ ಎಂದು ಅವರ ಮಾತಿಗೆ ವ್ಯತಿರಿಕ್ತವಾಗಿ ನುಡಿದರೆ, ಅವರ ವಂಶವನ್ನೇ ನಿರ್ಮೂಲ ಮಾಡುವವರೆಗೆ ಶಾನುಭೋಗರ ಹಟ ಸಾಧನೆಯಾಗುತ್ತಿತ್ತು. ಕೆಲವು ದಿನಗಳ ಮುಂಚೆ ಪಟೇಲರ ಪೈಕಿ ಯಾರೋ ಒಬ್ಬ ಹರಿಕಥೆಯ ದಾಸರು ಒಂದು ವಾರ ಭಾರತದ ಕಥೆಯನ್ನು ಹಳ್ಳಿಯಲ್ಲಿ ನಡೆಸಿದ್ದರಿಂದ, ಪಟೇಲರೊಡನೆ ವೈಮನಸ್ಸಿದ್ದ ಶಾನುಭೋಗರು ಸಾಹಿತಿ ಗಣವನ್ನೇ ಬರಮಾಡಿ, ಭಾರತದ ಆದಿ, ಭಾರತವೆಂದರೇನು ಎಂಬುದನ್ನೆಲ್ಲಾ ಹಳ್ಳಿಯವರಿಗೆ ತಿಳಿಸಬೇಕೆಂದು ಹಟ ತೊಟ್ಟಿದ್ದರು. ಹಳ್ಳಿಯಲ್ಲಿದ್ದ ಪ್ರತಿ ಯೊಂದು ಮನೆಯವರಿಂದಲೂ ಚಂದಾ ವಸೂಲಿಯಾಗಿತ್ತು. ಇವೆಲ್ಲಾ ಶಾಮ ನಿಗೆ ದಾರಿಯಲ್ಲಿ ಸಿಕ್ಕ ಕೆಲವರು ಮುಚ್ಚುಮರೆಯಿಲ್ಲದೆ ಹೇಳಿದರು. ಶಾಮನಿಗೆ ಅಳಬೇಕೋ ನಗಬೇಕೋ ತಿಳಿಯಲಿಲ್ಲ ಹೇಗಾದರೂ ಆಗಲಿ, ಉಪನ್ಯಾಸ ಗಳಿಂದ ಹಳ್ಳಿಯ ಜನರಿಗೆ ಸ್ವಲ್ಪವಾದರೂ ಪ್ರಯೋಜನವಾಗಬಹುದೆಂದು ಸಮಾಧಾನಪಟ್ಟು ಶಾಲೆಯ ಅಂಗಳಕ್ಕೆ ಹಿಂದಿರುಗಿದ. ಅಂದಿನ ಸಂಜೆಯೇ ಕಾರ್ಯಕ್ರಮವಿದ್ದುದರಿಂದ ಶಾಲೆಯ ಆವರಣವೆಲ್ಲಾ ಅಲಂಕಾರವನ್ನು ಪಡೆ

ಯಲು ಸಿದ್ಧವಾಗಿತ್ತು. ಸಾಹಿತಿಗಣವು ಶಾಲೆಯ ಅಂಗಳದಲ್ಲಿ ಮಲಗಿರು ವಾಗಲೇ ಶಾನುಭೋಗರು ಸ್ವತಃ ನಿಂತು, ತಳಿರುತೋರಣಗಳನ್ನೂ, ಬಾಳೆ ಕಂದುಗಳನ್ನೂ ಕಟ್ಟಿಸಿದರು. ಸಂಜೆ ೬ ಘಂಟೆಯಿಂದ ಉಪನ್ಯಾಸ, ಕಾವ್ಯ, ಗಾಯನ, ಮುಂತಾದ ಕಾರ್ಯಗಳು ಇಡಲ್ಪಟ್ಟಿವೆಯೆಂದು ಹಳ್ಳಿಯ ಜನರಿಗೆಲ್ಲಾ ಡಂಗುರದ ಮೂಲಕ ಸಾರಲಾಯಿತು.

೪

ಕಾರ್ಯಕ್ರಮವು ಸಂಜೆ ೬ ಘಂಟೆಯಿಂದ ಪ್ರಾರಂಭವಾಗುವುದೆಂದು ಹಳ್ಳಿಯ ಜನರಿಗೆಲ್ಲಾ ತಿಳಿದಿದ್ದರೂ, ಏಳು ಘಂಟೆಯವರಿವಿಗೆ ಒಬ್ಬರೂ ಶಾಲೆಯ ಕಡೆ ಬರಲಿಲ್ಲ. ನಂತರ ಒಬ್ಬೊಬ್ಬರಾಗಿ ಸುಮಾರು ಹತ್ತು ಜನ ಮುದುಕರು ಕುತೂಹಲದಿಂದ ಬಂದು ಒಂದು ಮೂಲೆಯಲ್ಲಿ ನಿಂತುಕೊಂಡರು. ಶಾನುಭೋಗರ ಕಡೆಯ ಐದಾರು ಮುಂದಾಳುಗಳು ಮಾತ್ರ ಶಾಲೆಯ ಕಟ್ಟಡದಲ್ಲಿ ಅರ್ಧ ಘಂಟೆ ಮುಂಚಿನಿಂದಲೇ ಹಾಜರಿದ್ದರು. ಉಪನ್ಯಾಸಗಳು, ಕಾವ್ಯ, ಗಾಯನ ಯಥಾವಿಧಿಯಾಗಿ ಜರುಗಿತು. ಆದರೆ ಅದರ ರಸವನ್ನು ಆಸ್ವಾದಿಸಲು ಮಾತ್ರ ಜನರಿರಲಿಲ್ಲ. ತಮ್ಮ ಹೆಚ್ಚುಗಾರಿಕೆಯನ್ನು ತೋರಿಸಿ ಕೊಳ್ಳಬೇಕೆಂದು ಪಟೇಲರು ರಾತ್ರಿ ೯ ಘಂಟೆ ಹೊತ್ತಿಗೆ ಬಂದು ಅಧ್ಯಕ್ಷರನ್ನು ಮಾತಾಡಿಸಿ, ಸಾಹಿತಿಗಣದ ಆಗಮನಕ್ಕಾಗಿ ಬಯಲು ನಾಟಕವೊಂದನ್ನು ಏರ್ಪಡಿಸಿರುವುದಾಗಿ ತಿಳಿಸಿ, ಆಹ್ವಾನಿಸಿದರು. ಶಾನುಭೋಗರ ಆತಿಥ್ಯ ದಿಂದಲೇ ಸಂತೃಪ್ತರಾಗಿದ್ದ ಸಾಹಿತಿಗಳು ಯತ್ನವಿಲ್ಲದೆ ಪಟೇಲರ ಆಹ್ವಾನ ವನ್ನು ಅಂಗೀಕರಿಸಬೇಕಾಯಿತು. ಪಟೇಲರ ಮನೆಯ ಮುಂದೆ ನಿರ್ಮಿಸ ಲ್ಪಟ್ಟಿದ್ದ ಚಪ್ಪರದಲ್ಲಿ ರಾತ್ರಿ ೧೨ ಘಂಟೆಗೆ ಬಯಲಾಟ ಪ್ರಾರಂಭವಾದಾಗ, ಸುಮಾರು ೫೦೦ ಜನ ಹಳ್ಳಿಯವರು ಸೇರಿದ್ದರು. ಹಳ್ಳಿಯ ಜನರಿಗೆ ಸಾಹಿತ್ಯ, ಕಾವ್ಯ, ಗಾಯನ, ಉಪನ್ಯಾಸ, ಮುಂತಾದ ಪದಗಳಿಗಿಂತ ಬಯಲಾಟದ ರುಚಿ ಚೆನ್ನಾಗಿ ತಿಳಿದಿದ್ದಂತೆ ನೋಡಿದವರಿಗೆ ಭಾಸವಾಗುತ್ತಿತ್ತು. ಬೆಳಗ್ಗೆ ೫ ಘಂಟೆಯವರಿವಿಗೂ ಆಟವು ಸಾಗಿದ ನಂತರ ಎಲ್ಲರೂ ಮನೆಗಳಿಗೆ ಹಿಂತಿರುಗಿದರು. ಸಾಹಿತಿಗಳಿದ್ದ ಮೂರು ದಿನಗಳೂ ಪಟೇಲರ ನೇತೃತ್ವದಲ್ಲಿ ಏರ್ಪಾಡಾಗುತ್ತಿದ್ದ ಬಯಲಾಟ, ಡೊಂಬರ ಕುಣಿತ, ಬೊಂಬೆ ಆಟ,

ಮುಂತಾದ ವಿನೋದಾವಳಿಗಳು ತುಂಬಾ ಚೆನ್ನಾಗಿದ್ದವು. ಶಾಮುವಿಗೇನೋ ತಾವೆಲ್ಲಾ ಬಂದು ಹಳ್ಳಿಯ ಜನರಿಗೆ ಜ್ಞಾನಾಭಿವೃದ್ಧಿ ಮಾಡುವ ಬದಲು, ಹಳ್ಳಿಯ ಜನರಿಂದ ತಿಳುವಳಿಕೆ ಪಡೆಯುತ್ತಿರುವಂತೆ ತೋರಿತು. ತಮ್ಮೆಲ್ಲ ರನ್ನು ಊರಿನಿಂದ ಕರೆಸಿಕೊಂಡು, ಆದರಿಸಿ, ಲೆಕ್ಕವಿಲ್ಲದೆ ಹಣ ಖರ್ಚುಮಾಡಿ ಸತ್ಕರಿಸಿದ ಹಳ್ಳಿಯ ಜನರಿಗೆ, ಸಾಹಿತಿಗಳೇನು ಪ್ರತಿಫಲ ಕೊಟ್ಟಾರೆಂಬುದು ಶಾಮುವಿಗೆ ಯೋಚಿಸಿದರೂ ತಿಳಿಯಲಿಲ್ಲ. ಇದರ ಜತೆಗೆ ಅಧ್ಯಕ್ಷರಿಂದ ಪಟೇಲರು ಸಿಕ್ಕಾಗ ಅವರನ್ನು ಕೊಂಡಾಡುವುದೂ, ಶಾನುಭೋಗರ ಭೆಟ್ಟಿಯಾದಾಗ ಅವರ ಕೆಲಸವನ್ನು ಪ್ರಶಂಸಿಸುವುದೂ ನಡೆದಿತ್ತು. ಅಂತೂ ಮೂರು ದಿನ ಗಳು ಚೆನ್ನಾಗಿ ತಿಂದು ತೇಗಿ, ಆಟ ಪಾಟ ನೋಡಿಕೊಂಡು ಸಾಹಿತಿಗಣವು ಊರಿಗೆ ಹಿಂದಿರುಗಿತು. ಊರಿಗೆ ಬಂದ ಮಾರನೆಯ ದಿನವೇ ಅಧ್ಯಕ್ಷರು ಶಾಮುವನ್ನು ಕರೆಸಿಕೊಂಡು, ಸಾಹಿತಿಗಳು ಹೋಗಿಬರಲು ತಗುಲಿದ ವೆಚ್ಚ ವನ್ನೆಲ್ಲಾ ಸಂಘದ ಲೆಖ್ಖಕ್ಕೆ ಬರೆಸಿ ರಶೀದಿಗಳನ್ನು ಸಹಾ ಒಪ್ಪಿಸಿದರು. ಹಣವು ಅನ್ಯಾಯವಾಗಿ ಖರ್ಚಾಯಿತೆಂದು ಶಾಮುವಿಗೆ ಭಾಸವಾಯಿತೇ ವಿನಹ ಹಳ್ಳಿಯಲ್ಲಿ ಸಾಹಿತ್ಯ ಪ್ರಚಾರಕ್ಕಾಗಿ ವಿನಿಯೋಗವಾಯಿತೆಂದು ತೋರಲಿಲ್ಲ. ಪತ್ರಿಕೆಗಳಲ್ಲೆಲ್ಲಾ ಸಾಹಿತಿಗಳು ಹಳ್ಳಿಗೆ ಹೋಗಿ ಜ್ಞಾನ ಪ್ರಸಾರ ಮಾಡಿದ ವರದಿ ಮುದ್ರಿತವಾಯಿತು. ಸಂಘದಿಂದಲೂ ಒಂದು ವಿಶೇಷ ಪತ್ರಿಕೆ ಸಹಾ ಹೊರಟಿತು. ಅಂತೂ ಸಂಘದ ಸದಸ್ಯರೆಲ್ಲಾ ಪತ್ರಿಕೆ ನೋಡಿ, ತಮ್ಮ ಸಂಘವು ಮಹತ್ಕಾರ್ಯವನ್ನು ಮಾಡುತ್ತಿದೆ ಎಂದು ತಿಳಿಯಲು ಬೇಕಾದ ನಾಟಕವು ನಡೆಯುತ್ತಿದೆ ಎಂದು ಶಾಮುನು ಮನಸ್ಸಿನಲ್ಲೇ ನಿಶ್ಚಯಿಸಿದ.

# ಐದನೆಯ ಭಾಗ

## ೧

ಶಾಮುನಿಗೂ ಗುರುಗಳಿಗೂ ಆದ ಸಂಭಾಷಣೆಯನ್ನು ಪತ್ರಿಕೆಯಲ್ಲಿ ಓದಿದ ರಾಮುವಿಗೆ ತನ್ನ ಮಿತ್ರನಾದ ಶಾಮುನೇ ಆ ಚರ್ಚೆಗೆ ಕಾರಣನಾಗಿರ ಬೇಕೆಂದು ಖಚಿತವಾಗಿ ತೋಚಿತು. ಇಷ್ಟು ದಿನಗಳಿಂದಲೂ ಶಾಮುನು ಎಲ್ಲಿ ಹೋದನೆಂಬುದು ತಿಳಿಯದೆ ಯೋಚಿಸುತ್ತಿದ್ದ ರಾಮುವು, ಆ ಸುದ್ದಿಯನ್ನು ನೋಡಿ ಅತ್ಯಂತ ಸಂತೋಷಪಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ ಮದರಾಸಿ ನಲ್ಲೇ ಶಾಮುನು ಇರುವನೆಂದು ಊಹಿಸುವಷ್ಟು ವಿಷಯವು ಆ ಸಮಾಚಾರ ದಿಂದ ರಾಮುವಿನ ಮುಂದಿತ್ತು. ಆದರೂ ಆ ದೊಡ್ಡ ಪಟ್ಟಣದಲ್ಲಿ ವಿಳಾಸವು ಸರಿಯಾಗಿ ತಿಳಿಯದುದರಿಂದ, ಹುಡುಕುವುದೆಲ್ಲಿ ಎನ್ನುವ ಸಂದೇಹ ರಾಮುವಿನ ಮನಸ್ಸಿಗೆ ನೋವನ್ನೇ ಉಂಟುಮಾಡಿತು:

ಕಲ್ಕತ್ತಾದಲ್ಲಿ ಪರೀಕ್ಷೆಯನ್ನು ಮುಗಿಸಿದನಂತರ ರಾಮುವು ಮಂಗಳೂರಿಗೆ ಹಿಂದಿರುಗಿ, ಕೆಲವು ದಿನಗಳಿದ್ದು, ಮದರಾಸಿಗೆ ಕೆಲಸಕ್ಕಾಗಿ ಬಂದಿದ್ದ. ತಿಂಗಳಿಗೆ ಇನ್ನೂರು ರೂಪಾಯಿನಮೇಲೆ ಅವನಿಗೆ ವಾಗ್ದಾನ ಮಾಡಿದ್ದವರೇ ಕೆಲಸ ವನ್ನು ಕೊಟ್ಟಿದ್ದರು. ಕಮಲಳಿಗೂ ಮಂಗಳೂರಿನ ಮನೆ, ವಾತಾವರಣ ಬೇಸರವಾಗಿದ್ದುದರಿಂದ, ತಂದೆಯ ಅನುಮತಿಯನ್ನು ಪಡೆದು ಅಣ್ಣನ ಜತೆ ಯಲ್ಲಿದ್ದು ಕೆಲವು ಕಾಲ ಕಳೆಯಲು, ಹಾಗೂ ಮದರಾಸನ್ನು ನೋಡಲು ಬಂದಿದ್ದಳು. ರಾಮುವು ಮೈಲಾಪುರದಲ್ಲಿ ಸುಮಾರಾದ ಒಂದು ಸಣ್ಣ ಮನೆ ಯನ್ನ ಬಾಡಿಗೆಗೆ ತೆಗೆದುಕೊಂಡು ತನ್ನ ತಂಗಿಯೊಡನೆ ವಾಸಿಸುತ್ತಿದ್ದ. ಮಕ್ಕಳಿಗೆ ಬೇಕಾದ ಅನುಕೂಲಗಳನ್ನೆಲ್ಲಾ ತಮ್ಮಯ್ಯನವರು ಮಾಡಿಕೊಟ್ಟಿ ದ್ದರು. ಕೊನೆಗೆ ತಮ್ಮಲ್ಲಿದ್ದ ಅಡುಗೆಯವನನ್ನು ಸಹಾ ಮದರಾಸಿಗೆ ಕಳುಹಿಸಿದ್ದರು.

ರಾಮುವು ಕಲ್ಕತ್ತಾದಲ್ಲಿ ಓದುತ್ತಿರುವಾಗ ಶಾಮುನು ಮಂಗಳೂರಿಂದ ಆಗಾಗ್ಗೆ ಪತ್ರಗಳನ್ನು ಬರೆಯುತ್ತಿದ್ದ. ಆದರೆ ಅವನು ತಮ್ಮಯ್ಯನವರ ಕೆಲಸ ಬಿಟ್ಟನಂತರ ಪತ್ರವ್ಯವಹಾರವನ್ನು ನಿಲ್ಲಿಸಿ ತಾನು ಎಲ್ಲಿರುವೆನೆಂಬ

ವಿಷಯುವನ್ನು ಸಹಾ ರಾಮುವಿಗೆ ತಿಳಿಸಲಿಲ್ಲ. ಕಮಲಳೇ ನಡೆದ ವಿಷಯು ಗಳನ್ನೆಲ್ಲಾ ರಾಮುವಿಗೆ ಒಂದೊಂದಾಗಿ ಹೇಳಿದಳು. ಕೇಳಿದಹಾಗೆ ಶಾಮನ ವಿಷಯುದಲ್ಲಿ ಮನಸ್ಸು ಕೆಡುವ ಬದಲು ಆತನು ಒಬ್ಬ ಆದರ್ಶ ಮನುಷ್ಯನೆಂದೂ ಸಾಮಾನ್ಯನಾದರೂ ತಪ್ಪು ಹಾದಿ ಹಿಡಿಯುುವವನಲ್ಲವೆಂದೂ ರಾಮುವಿಗೆ ತೋಚಿತು. ರಾಮುವಿನ ಮನಸ್ಸು ಕಾರಣವಿಲ್ಲದೆ ಇತರರ ಮಾತುಗಳಿಂದ ಶಾಮನು ವ ನೆ ಬಿಡಬೇಕಾದ ಪರಿಸ್ಥಿತಿ ಬಂದುದಕ್ಕೆ ತುಂಬಾ ಕೊರಗಿತು. ತನ್ನ ಹೊಸ ಕೆಲಸದ ಗಡಿಬಿಡಿಯಲ್ಲೂ, ಶಾಮನ ಯೋಚನೆಯೇ ಹೆಚ್ಚಾಗಿ ಅವನನ್ನು ಎಂದು ಕಂಡೇನೋ, ಎಂದು ಮಾತಾಡುತ್ತೇನೋ ಎಂಬುದಾಗಿ ರಾಮುವು ಹಾತೊರೆಯುತ್ತಿದ್ದ. ವಿರಾಮವಾದಾಗಲೆಲ್ಲಾ ತನ್ನ ಮಿತ್ರನೊಡನೆ ಶಾಮನ ವಿಷಯುವನ್ನು ಪ್ರಸ್ತಾಪಿಸಿ, ಅವನೆಲ್ಲಿರುವನೆಂಬುದನ್ನು ತಿಳಿಯಲು ಪ್ರಯತ್ನಿಸತೊಡಗಿದ ಮೊದಲು ಮೊದಲು ಕಮಲಳ ಮನಸ್ಸು ಶಾಮನ ವಿಷಯುವಾಗಿ ಯಾವೊಂದು ನಿರ್ಧಾರಕ್ಕೂ ಬಂದಿರಲಿಲ್ಲ. ಆದರೆ ಪ್ರತಿ ನಿಮಿಷವು ತನ್ನ ಅಣ್ಣನು ಆತನಲ್ಲಿಟ್ಟಿರುವ ವಿಶ್ವಾಸವನ್ನು ಕಂಡಮೇಲೆ ಶಾಮುವು ಯಾಕೆ ಇಷ್ಟೊಂದು ಪರಿತಪಿಸುತ್ತಾನೆ ಎನ್ನಿಸುತ್ತಿತ್ತು. ದಿನಗಳು ಕಳೆದಂತೆಲ್ಲಾ ಶಾಮನ ವಿಚಾರವೇ ರಾಮುವಿನ ಯೋಚನೆಗೆ ಕಾರಣವಾಯಿತು. ಮನೆಗೆ ಬಂದೊಡನೆ ತಾನು ಅಂದು ಮಾಡಿದ ಪ್ರಯತ್ನಗಳನ್ನೆಲ್ಲಾ ಕಮಲಳೊಡನೆ ವಿಶದವಾಗಿ ಹೇಳುತ್ತಿದ್ದ. ಆದರೂ ಶಾಮನೆಲ್ಲಿರುವನೆಂಬ ಸುದ್ದಿ ಅವನಿಗೆ ತಿಳಿಯಲು ಅನುಕೂಲವಾಗಿರಲಿಲ್ಲ. ಶಾಮನ ಪೂರ್ತಿ ಹೆಸರು, ಕುಲ, ಗೋತ್ರ, ಪೂರ್ವ ಚರಿತ್ರೆ ಇವೊಂದೂ ತಿಳಿಯದುದರಿಂದ ಹುಡುಕುವ ಕೆಲಸ ಕಠಿಣವಾಗಿತ್ತು.

ರಾಮುವು ಮನೆಗೆ ಬಂದು ಉಪಾಹಾರ ತೆಗೆದುಕೊಳ್ಳುತ್ತಿದ್ದ ಒಂದು ಸಂಜೆ, ಅವನಿಗೆ ಆಶ್ಚರ್ಯವಾಗುವಂತೆ ತಂಗಿಯು ಅವನ ಮುಂದೆ ಒಂದು ಪತ್ರಿಕೆಯನ್ನು ಇಟ್ಟಳು. ಅದರಲ್ಲಿ ಒಂದು ಕಡೆ ಕೆಂಪು ಶಾಯಿಯಿಂದ ಗುರ್ತು ಮಾಡಲ್ಪಟ್ಟಿತ್ತು. ಉತ್ಸುಕತೆಯಿಂದ ರಾಮುವು ಪತ್ರಿಕೆಯನ್ನು ಕೈಗೆ ತೆಗೆದುಕೊಂಡ. ಸಾಹಿತ್ಯದಲ್ಲಿ ಅಭಿರುಚಿಯನ್ನು ಹೊಂದಲು ಕಮಲಳು ತಪಿಸುತ್ತಿದ್ದ ಸಾಹಿತ್ಯ ಸಂಘದ "ನಲ್ನುಡಿ" ಎಂಬ ಪತ್ರಿಕೆಯೇ ಅದಾಗಿತ್ತು. "... ಹಳ್ಳಿಗೆ ಸಾಹಿತ್ಯ ಸಂಘದವರು ಅಧ್ಯಕ್ಷರೊಡನೆ ಹೋಗಿದ್ದರು.

ಉಪನ್ಯಾಸ, ಕಾವ್ಯ, ಗಾಯನ, ವಾಚನ, ಮುಂತಾದವು ನಡೆಯಿತು ಹಳ್ಳಿ ಯುವರು ಸಾಹಿತಿಗಳ ಗೌರವಾರ್ಥವಾಗಿ ಬಯಲು ನಾಟಕಗಳನ್ನು ಆಡಿದರು. ಸಂಘದ ಆಶ್ರಯದಿಂದ ಹೋಗಿದ್ದ ಸಾಹಿತಿಗಳ ಮೇಲ್ವಿಚಾರಣೆಯನ್ನೆಲ್ಲಾ ಸಂಘದ ನೌಕರರಾದ ಶ್ರೀ ಶಾಮು ಇವರು ಬಹಳ ಮುತುವರ್ಜಿಯಿಂದ ನೋಡಿಕೊಂಡರು" ಎಂದಿತ್ತು. ತಿನ್ನುತ್ತಿದ್ದ ತಿಂಡಿಯನ್ನು ರಾಮುವು ಅಲ್ಲಿಗೇ ನಿಲ್ಲಿಸಿದ. ಕಮಲಳನ್ನು ನೋಡಿ ಮುಗುಳ್ನಗೆ ನಕ್ಕು ಕೋಟನ್ನು ಹೆಗಲಿಗೇರಿಸಿ ಮತ್ತೊಂದು ಮಾತನ್ನೂ ಆಡದೆ ಸಾಹಿತ್ಯ ಸಂಘದ ಕಡೆ ಹೆಜ್ಜೆ ಹಾಕಿದ. ಬೆಳಗ್ಗಿನಿಂದಲೂ ದುಡಿದು ಶಾಮನು ಆಗತಾನೆ ಸಂಘದ ಕಚೇರಿ ಯಿಂದ ಹೊರಗೆ ಹೊರಡುವ ಪ್ರಯತ್ನವನ್ನು ಮಾಡುತ್ತಿದ್ದ. ಅಷ್ಟರಲ್ಲಿ ಜವಾನನು ಒಳಗೆ ಬಂದು ಯಾರೋ ಹುಡುಕಿಕೊಂಡು ಬಂದಿರುವುದಾಗಿ ತಿಳಿಸುತ್ತಲೂ, ಶಾಮನೇ ಎದ್ದು ಹೊರಗೆ ಬಂದು ನಿಂತಿದ್ದ ವ್ಯಕ್ತಿಯನ್ನು ಒಂದೆರಡು ನಿಮಿಷ ದೃಷ್ಟಿಸಿ ನೋಡಿದ. ರಾಮುವಿಗೇನೋ ತಕ್ಷಣ ತನ್ನ ಹಳೆಯ ಮಿತ್ರನ ಗುರುತು ಸಿಕ್ಕಿತು. ಆದರೆ ನೋಡಿದೊಡನೆ ಶಾಮನು ಅವನನ್ನು ಗುರ್ತಿಸಲಾಗಲಿಲ್ಲ ನಗುತ್ತಾ ರಾಮುವು ಒಂದೆರಡು ಮಾತು ಆಡಿದನಂತರ ಮಿತ್ರರಿಬ್ಬರ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಶಾಮನ ಕಾರ್ಯವೂ ಮುಗಿದಿದ್ದರಿಂದ ಇಬ್ಬರೂ ಮಾತಾಡಿಕೊಂಡು ಹೊರ ಟರು. ಕುಶಲಪ್ರಶ್ನೆಗಳಾದಮೇಲೆ ತನಗೆ ತಿಳಿಸದೆ ತನ್ನ ಮನೆಯನ್ನು ಬಿಟ್ಟುಹೋದುದಕ್ಕಾಗಿಯೂ, ಮತ್ತು ಇಷ್ಟು ದಿನಗಳಾದರೂ ಪತ್ರ ಬರೆಯದೆ ಇದ್ದುದಕ್ಕೂ ರಾಮುವು ಶಾಮನನ್ನು ಬಹಳವಾಗಿ ನಿಂದಿಸುವುದರ ಮೂಲಕ ತನ್ನ ಸ್ನೇಹವನ್ನು ವ್ಯಕ್ತಪಡಿಸಿದ. ಈ ವಿಷಯದಲ್ಲಿ ರಾಮು ಕೋಪಗೊಂಡಿ ದ್ದರೂ, ನಾಲ್ಕು ಮಾತುಗಳಿಂದ ಸನ್ನಿವೇಶಗಳು ಆ ರೀತಿಯಿದ್ದವೆಂದು ಸೂಕ್ಷ್ಮವಾಗಿ ತಿಳಿಸಿ, ಸಮಾಧಾನಪಡಿಸಲು ಶಾಮನು ಪ್ರಯತ್ನಮಾಡ ಬೇಕಾಯಿತು. ನಿಧಾನವಾಗಿ ಹೆಜ್ಜೆಹಾಕುತ್ತಾ ರಾಮುವು ತನ್ನ ವಿಷಯ ವನ್ನೆಲ್ಲಾ ವಿಶದವಾಗಿ ತಿಳಿಸಿ, ತನ್ನ ಮನೆಯವರ ಕ್ಷೇಮಸಮಾಚಾರವನ್ನು ಹೇಳಿ, ತಾನು ಕೆಲಸಕ್ಕಾಗಿ ಬಂದಿರುವುದೂ, ಮೈಲಾಪುರದಲ್ಲಿ ಮನೆಯನ್ನು ಮಾಡಿರುವುದೂ, ಶಾಮನನ್ನು ಹುಡುಕಲು ಪಟ್ಟ ಪ್ರಯತ್ನಗಳೂ ಮುಂತಾದ ವಿಷಯಗಳೆಲ್ಲವನ್ನೂ ಹೇಳಿದ. ರಾಮುವಿನ ಹೃದಯ, ಆತ್ಮೀಯತೆ, ಸ್ನೇಹ

ಭಾವ ಎಲ್ಲವೂ ಶಾಮುನಿಗೆ ಮುಂಚಿನಿಂದಲೂ ಚೆನ್ನಾಗಿ ತಿಳಿದೇ ಇತ್ತು. ಶಾಮನೂ ಸಹ ತಾನು ಮಂಗಳೂರನ್ನು ಬಿಟ್ಟನಂತರ ಅನುಭವಿಸಿದ ವಿಷಯಗಳೆಲ್ಲವನ್ನೂ ಯಥಾವತ್ತಾಗಿ ಹೇಳಿ, ಪ್ರಪಂಚವು ಹೇಗಿದೆ ಎಂಬುದನ್ನು ವಿವರಿಸಿದ. ಇಷ್ಟು ಹೊತ್ತಿಗೆ ಇಬ್ಬರೂ ಮೈಲಾಪುರದ ಹತ್ತಿರವೇ ಬಂದು ಬಿಟ್ಟಿದ್ದರು. ತನ್ನ ಮನೆಗೆ ಆಗಲೇ ಬಂದು ಹೋಗಬೇಕೆಂದು ಒತ್ತಾಯದಿಂದ ರಾಮುವು ಶಾಮುನನ್ನು ಕರೆದುಕೊಂಡು, ತನ್ನ ಮನೆಯಿದ್ದ ಬೀದಿಯಲ್ಲಿ ನಡೆಯುತೊಡಗಿದ. ಶಾಮನು ತಮ್ಮಯ್ಯನವರ, ಸೀತಮ್ಮನವರ, ವಿಷಯ ಗಳನ್ನೂ, ರಾಮುವಿನ ವ್ಯಾಸಂಗ, ಕೆಲಸ, ಮುಂತಾದುವನ್ನೂ ಕುತೂಹಲದಿಂದ ವಿಚಾರಿಸಿದರೂ ಕಮಲಳ ಪ್ರಸ್ತಾಪವನ್ನು ಮಾಡಿರಲಿಲ್ಲ. ರಾಮುವೂ ಸಹ ಎಲ್ಲರೂ ಸೌಖ್ಯವೆಂದೂ, ತನ್ನ ಓದು, ಫಲಿತಾಂಶ, ಸಿಕ್ಕಿರುವ ಕೆಲಸದ ವಿವರ ವನ್ನು ಮಾತ್ರ ತಿಳಿಸಿದ. "ನಮ್ಮ ಮನೆಗೆ ಹೋಗೋಣ" ಎಂದು ರಾಮುವು ಕರೆದುಕೊಂಡು ಹೋಗುತ್ತಿರುವನಲ್ಲಾ, ಇವನಿಗೆ ವಿವಾಹವಾಯಿತೇ, ತನ್ನ ಸ್ವಂತ ಮನೆಯನ್ನು ಇಲ್ಲಿ ಸ್ಥಾಪಿಸಿರುವನೇ, ಒಂದು ವೇಳೆ ವಿವಾಹವಾಗದಿದ್ದಲ್ಲಿ, ರಾಮುವಿಗೆ ಮಾತ್ರ ಮನೆಯೇಕೆ ಬೇಕು" ಎಂದು ಶಾಮುನಿಗೆ ನಾನಾವಿಧವಾದ ಸಂದೇಹಗಳು ಮನಸ್ಸಿಗೆ ಬಂದವು. ಆದರೆ ರಾಮುವು ಎಷ್ಟೇ ಮಿತ್ರನಾದರೂ ಶಾಮನು ಈ ಸ್ವಂತ ವಿಷಯಗಳನ್ನು ಪ್ರಶ್ನಿಸಲಾರದೆ ಅನುಮಾನಪಡ ಬೇಕಾಯಿತು. ದೂರದಿಂದಲೇ ರಾಮುವು ತನ್ನ ಮನೆಯನ್ನು ತೋರಿಸಿದ. ಬಾಗಿಲಿನಲ್ಲಿ ನಿಂತಿದ್ದ ಕಮಲಳು ಇವರನ್ನು ನೋಡಿ ಒಳಗೆ ಹೋದಳು. ಬಹುಶಃ ರಾಮುವಿನ ಹೆಂಡತಿಯೇ ಇರಬೇಕೆಂದು ಶಾಮನು ಮನಸ್ಸಿನಲ್ಲಿಯೇ ನಿಶ್ಚಯಿಸಿ, ಮರುಮಾತಾಡದೆ ಮನೆಯೊಳಕ್ಕೆ ಪ್ರವೇಶಿಸಿದ. ಮೇಜಿನಮೇಲೆ ಇಬ್ಬರಿಗೂ ತಿಂಡಿ, ಕಾಫಿಯು ಅಣಿಮಾಡಲ್ಪಟ್ಟಿತ್ತು. ಇಬ್ಬರೂ ನಿಧಾನವಾಗಿ ತಿಂದು ಕಾಫಿಯನ್ನು ಕುಡಿದರು. ಶಾಮನು ಕೋಣೆಯನ್ನೆಲ್ಲಾ ತಲೆಯೆತ್ತಿ ಪರೀಕ್ಷಿಸಿ, "ಮನೆ ತುಂಬಾ ಚೆನ್ನಾಗಿಟ್ಟುಕೊಂಡಿದ್ದೀಯು, ರಾಮು, ಬಹಳ ಸಂತೋಷ" ಎಂದ. ಅವನು ಆ ರೀತಿ ಹೇಳಿದ್ದು ಮನೆಯಾಕೆಯ ವಿಷಯ ವನ್ನು ರಾಮುವೇ ಹೇಳಲಿ ಎಂಬ ಉದ್ದಿಶ್ಯದಿಂದ. "ಮನೆ ಈ ರೀತಿ ಇರಲು, ಕಾರಣರಾಗದವರ ಬುದ್ಧಿಯನ್ನು ನೀನು ಕೊಂಡಾಡಿದೆ" ಎಂದು ಅರ್ಥಗರ್ಭಿತ ವಾದ ಉತ್ತರವು ರಾಮುವಿನಿಂದ ಬಂದಿತು. "ಮತ್ತೆ ಮದುವೆಯಾದ ವಿಷ

ಯವೇ ನನಗೆ ತಿಳಿಸಲಿಲ್ಲವಲ್ಲಾ" ಶಾಮನು ನಗುತ್ತಾ ಪ್ರಶ್ನಿಸಿದ. "ಮದುವೆ ಆಯಿತು ಎಂದು ಯಾರು ಹೇಳಿದರು." ರಾಮುವಿನ ಉತ್ತರವು ಶಾಮನಿಗೆ ಆಶ್ಚರ್ಯವುಂಟುಮಾಡಿತು. "ನೀನು ಹೇಳುವುದು ನನಗೆ ಸರಿಯಾಗಿ ಅರ್ಥವೇ ಆಗಲಿಲ್ಲ" ಶಾಮನು ಸಂದೇಹಪಡುತ್ತಲೂ, "ಇದೆಲ್ಲಾ ಕಮಲಳ ಪ್ರಭಾವ" ಎಂದು ರಾಮುವು ತಿಳಿಸಿದ. ಹಾಗಾದರೆ ನಾವು ಬಂದಾಗ ಬಾಗಿಲಿನಲ್ಲಿ ನಿಂತಿದ್ದ ಹೆಣ್ಣು ಕಮಲಳೇ ಎಂದು ಶಾಮನಿಗೆ ಅರ್ಥವಾಯಿತು. ಎಷ್ಟು ಬೆಳವಣಿಗೆ, ಎಷ್ಟು ಮಾರ್ಪಾಡು, ಎಂದು ಮನಸ್ಸಿನಲ್ಲಿಯೇ ಯೋಚಿಸಿದ. ಕಮಲಳು ಅದೇ ಮನೆಯಲ್ಲಿರುವಳೆಂದು ತಿಳಿದಮೇಲೆ ವ್ಯಕ್ತಪಡಿಸಲಾರದ ಒಂದು ಅನುಭವವು ಶಾಮನನ್ನು ಆವರಿಸಿತು. "ಕಮಲಳನ್ನು ಮಾತಾಡಿಸುವುದು ಹೇಗೆ, ಆಕೆಯು ತನ್ನ ವಿಷಯದಲ್ಲಿ ಯಾವ ಭಾವನೆಯನ್ನು ಈಗ ತಾಳಿರಬಹುದು?" ಎಂದು ಮನಸ್ಸಿನಲ್ಲಿ ಯೋಚಿಸುತ್ತಿರುವಾಗಲೇ, ರಾಮುವು "ನಾರಣಪ್ಪಾ" ಎಂದು ಅಡಿಗೆಯವನನ್ನು ಕೂಗಿ, ರಾತ್ರಿ ಭೋಜನಕ್ಕೆ ಒಟ್ಟು ಮೂವರೆಂದು ತಿಳಿಸಿದ. ಬಾಗಿಲಿಗೆ ಬಂದು ನಿಂತ ನಾರಣಪ್ಪನಿಗೂ ಶಾಮನನ್ನು ನೋಡಿ ಅತ್ಯಂತ ಸಂತೋಷವಾಯಿತು. ಅವನ ಯೋಗಕ್ಷೇಮವನ್ನು ಶಾಮನು ಮಮತೆಯಿಂದ ವಿಚಾರಿಸಿದ. ಊಟಕ್ಕೆ ನಿಲ್ಲಲು ಆಗುವುದಿಲ್ಲವೆಂದೂ, ತನ್ನ ಮಿತ್ರನಾದ ಕಿಟ್ಟುವು ಕಾದಿರುತ್ತಾನೆಂದೂ ಎಷ್ಟು ಹೇಳಿದರೂ ರಾಮುವು ಒಪ್ಪಲಿಲ್ಲ. ಕಿಟ್ಟುವಿಗೆ ವರ್ತಮಾನ ಹೇಳಿಕಳುಹಿಸುವುದಾಗಿ ಭರವಸೆಯಿತ್ತು, ರಾಮುವು ಜವಾನನೊಡನೆ ವಿಷಯವನ್ನು ತಿಳಿಸಿ, ಅವನನ್ನು ಕಳುಹಿಸಿದ. "ಅಂತೂ ಇಷ್ಟು ದಿನಗಳಾದಮೇಲಾದರೂ, ನಿನ್ನ ದರ್ಶನವಾಗಿದ್ದು, ಯಾರೋ ಒಬ್ಬ ಆತ್ಮೀಯ ಬಂಧುವನ್ನು ನೋಡಿದಹಾಗಾಯಿತು ಶಾಮು" ಎಂದು ರಾಮುವು ನಸುನಕ್ಕು "ಕಮಲಾ, ಒಂದೆರಡು ಚೂರು ಅಡಿಕೆ ಇದ್ದರೆ ತಾ" ಎಂಬುದಾಗಿ ಕೂಗಿದ. ಒಂದು ತಟ್ಟೆಯಲ್ಲಿ ಎಲೆ ಅಡಿಕೆಯನ್ನು ತಂದಿಟ್ಟು ಕಮಲಳು ರೇಡಿಯೋವನ್ನು ತಿರುಗಿಸಲು ನಿಂತಳು. ಶಾಮನು ಬಗ್ಗಿಸಿದ ತಲೆಯನ್ನು ಮೇಲೆತ್ತಲಿಲ್ಲ ಅಡಿಕೆಯನ್ನು ಬಾಯಿಗೆ ಹಾಕಿ, "ಏನೋ ಶಾಮು, ಬಹಳ ನಾಚಿಕೆಪಡುತ್ತಿರುವಂತಿದೆ, ಕಮಲಳು ಹೊಸಬಳೆ" ಎಂದ ರಾಮು. ಶಾಮನ ಬಾಯಿಂದ ಮಾತೇ ಹೊರಡಲಿಲ್ಲ. ಮಂಗಳೂರಿನಲ್ಲಿದ್ದಾಗ, ಕಮಲಳೊಡನೆ ಯಾವ ತಡೆಯೂ ಇಲ್ಲದೆ ಮಾತಾಡು

ತ್ತಿದ್ದ. ಅವರಲ್ಲಿ ಭೇದಭಾವವೂ ಆಗಿರಲಿಲ್ಲ. ಆದರೆ ಈಗ! ಮಾತಾಡಿಸುವುದು ಹೇಗೆ, ಏನು ಮಾತಾಡಿಸಬೇಕು ಎಂದು ಶಾಮನು ಆಲೋಚಿಸಿದ ಅದೂ ಅಲ್ಲದೆ ಎಷ್ಟಾದರೂ ಆಕೆಯು ತನ್ನ ಅಧಿಕಾರಿಯಾಗಿದ್ದವರ ಮಗಳು. ಆಕೆಯ ಸ್ಥಾನವೆಲ್ಲಿ, ತಾನೆಲ್ಲಿ, ಎಂಬ ಭಾವನೆಯೂ ಸಹ ಅವನ ಬಾಯನ್ನು ಹಿಡಿದಿತ್ತು. ಆದರೆ ಕಮಲಳೇ ರೇಡಿಯೋ ತಿರುಗಿಸಿದನಂತರ "ಏನು ಕ್ಷೇಮವೇ, ರಾಮು ಬಹಳವಾಗಿ ಪ್ರತಿನಿತ್ಯ ಯೋಚಿಸುತ್ತಿದ್ದ ಈ ಊರಿಗೆ ಬಂದನಂತರ ಒಂದು ದಿನವಾದರೂ ಅವನು ಆಲೋಚಿಸದೇ ಇರಲಿಲ್ಲ" ಎಂದಳು. ಶಾಮನೂ ತಲೆಯೆತ್ತಿ ಆಕೆಯನ್ನು ನೋಡಿ "ಎಲ್ಲಾ ರಾಮುವಿನ ವಿಶ್ವಾಸ, ಕೇವಲ ಒಬ್ಬ ನೌಕರನಾಗಿದ್ದವನನ್ನು ಇಷ್ಟು ಮಟ್ಟಿಗೆ ಆತ್ಮೀಯತೆಯಿಂದ ಕಾಣುವುದು ರಾಮುವಿನ ವಿಶಾಲ ಹೃದಯವನ್ನು ತೋರಿಸುತ್ತದೆ" ಎಂದ. ಕಮಲಳ ಮನಸ್ಸಿಗೆ ತಕ್ಷಣ ತಾನು "ಶಾಮನೊಬ್ಬ ಎಷ್ಟಾದರೂ ಗುಮಾಸ್ತೆ" ಅಂದು ಕೊಳ್ಳುತ್ತಿದ್ದ ಭಾವನೆಯೂ ಜ್ಞಾಪಕಕ್ಕೆ ಬಂದಿತು. "ನೀನು ನೌಕರ ನಾಗಿದ್ದವನೆಂದು ನಾನು ವಿಶ್ವಾಸಿಸುತ್ತಿಲ್ಲ, ಶಾಮು. ನೀನೊಬ್ಬ ಸ್ನೇಹಿತನೆಂದು ಗೌರವಿಸುತ್ತಿದ್ದೇನೆ" ರಾಮುವು ಉತ್ತರಕೊಟ್ಟ.

೨

ಊಟಕ್ಕೆ ಕುಳಿತಾಗ, ಶಾಮನು ಮಂಗಳೂರನ್ನು ಬಿಟ್ಟುಬಂದನಂತರ ನಡೆದುದೆಲ್ಲವನ್ನೂ ರಾಮು ಕಮಲಳಿಂದ ತಿಳಿದುಕೊಂಡ ಕಮಲಳ ಲಗ್ನದ ಏರ್ಪಾಡು, ಅದು ಅನಿರೀಕ್ಷಿತವಾಗಿ ತಪ್ಪಿದ ಬಗೆಯನ್ನು ರಾಮುವು ನಗುತ್ತಾ ತಿಳಿಸಿ, ಲಗ್ನವು ನಿಂತುದರಿಂದ ಕಮಲಳ ಜಾತಕವು ಕೆಟ್ಟದೆಂದೂ, ನಕ್ಷತ್ರವು ಸರಿಯಿಲ್ಲವೆಂದೂ ಸೀತಮ್ಮನವರು ಮಾಡುತ್ತಿದ್ದ ಪ್ರಚಾರವನ್ನು ಹೇಳಿದ. ಕಮಲಳ ನಕ್ಷತ್ರ ಕೆಟ್ಟದ್ದೆಂದು ಕೇಳಿದೊಡನೆ ಶಾಮನಿಗೂ ನಗು ಬಂದಿತು— ಕಮಲಳೂ ನಗದಿರಲಿಲ್ಲ. "ತಮ್ಮ ನಕ್ಷತ್ರ, ಜಾತಕ, ಹಣೇಬರಹವು ಸರಿ ಯಿಲ್ಲದಿದ್ದರೆ ಇತರರಮೇಲೆ ಹೇಳುವುದು ಸ್ವಾಭಾವಿಕ" ಎಂದ ಶಾಮು. ರಘುವಿನ ಮುಂದಿನ ಗತಿಯನ್ನು ಶಾಮನು ವಿಚಾರಿಸಿದ. ಈ ಲಗ್ನದ ಏರ್ಪಾಡು ಈ ರೀತಿ ಪರ್ಯವಸಾನವಾದುದರಿಂದ, ತಮ್ಮಯ್ಯನವರಿಗೂ ಮಕ್ಕಳ ಮಾತನ್ನು ಕೇಳದೆ ಮುಂದುವರೆದುದು ಪಶ್ಚಾತ್ತಾಪಕ್ಕೆ ಕಾರಣವಾಗಿದೆ

ಯೆಂಬುದೂ ತಿಳಿಯಿತು. ಮಾತಿನಲ್ಲಿ ರಾತ್ರಿ ೧೦ ಘಂಟೆಯಾದರೂ ಶಾಮುನ ಮನಸ್ಸಿಗೆ ಬರಲಿಲ್ಲ. ರಾಮುವೇ ಮೇಲಕ್ಕೆದ್ದು ಕೈ ತೊಳೆದುಕೊಂಡಮೇಲೆ ಶಾಮುನೂ ಹಿಂಬಾಲಿಸಿದ. ರಾತ್ರಿ ಅಲ್ಲಿಯೇ ಇರಬೇಕೆಂದು ಎಷ್ಟು ಬಲವಂತ ಮಾಡಿದರೂ ಶಾಮುನು ಒಪ್ಪಲಿಲ್ಲ. ರಾಮುವೂ ಮಿತ್ರನನ್ನು ಸ್ವಲ್ಪ ದೂರ ಬಿಟ್ಟುಬಂದು, ಇನ್ನೂ ಕುರ್ಚಿಯಮೇಲೆ ಕುಳಿತಿದ್ದ ಕಮಲಳನ್ನು ನೋಡಿ, "ಏನು ಕಮಲಮ್ಮನವರೇ, ಏನು ಹೇಳುತ್ತೀರಿ" ಎಂದು ಕುಚೇಷ್ಟೆಗೆ ಆರಂಭಿಸಲು, ಕಮಲಳು ಯಾವ ಉತ್ತರವನ್ನೂ ಕೊಡದೆ, "ಸುಮ್ಮನೆ ತಮಾಷೆ ಮಾಡಬೇಡ ರಾಮು" ಎಂದಿಷ್ಟೇ ಹೇಳಿ, ತನ್ನ ಕೊಟಡಿಗೆ ಹೋದಳು. ಮಾರನೆಯ ದಿನವೂ ರಾಮು ಶಾಮುನನ್ನು ಸಂಜೆ ಮನೆಗೆ ಕರೆದುಕೊಂಡು ಬಂದು ತಿಂಡಿ ಕಾಫಿಯನ್ನು ಕೊಟ್ಟು, ಇನ್ನುಮೇಲೆ ತಮ್ಮ ಮನೆಯಲ್ಲೇ ಇರಬೇಕೆಂದು ಕೇಳಿದ—ಶಾಮುನ ಮನಸ್ಸು ಅದಕ್ಕೆ ಒಪ್ಪಲಿಲ್ಲ. ಕ್ರಮೇಣ ಕಿಟ್ಟುವಿಗೂ, ರಾಮು ಕಮಲಳ ಪರಿಚಯವು ಶಾಮುನ ಮೂಲಕ ಆಯಿತು. ರಾಮುವಿನ ಅಭಿಪ್ರಾಯವೇನೆಂಬುದನ್ನು ಕಿಟ್ಟುವು ಸುಲಭವಾಗಿ ಅರಿತುಕೊಂಡ. ಈ ಮಧ್ಯೆ ರಾಮುವು ತನ್ನ ತಂದೆಗೆ ವಿಶದವಾದ ಕಾಗದವನ್ನು ಬರೆದು, "ಶಾಮುನು ಪುನಃ ಭೆಟ್ಟಿಯಾದ ವಿಷಯವನ್ನೂ, ಅವನ ಗುಣವನ್ನೂ ಬಹುಶಃ ಕಮಲಳು ಅವನನ್ನು ಲಗ್ನವಾಗಲು ಒಪ್ಪಬಹುದೆಂದೂ ತಿಳಿಸಿದ." ತಮ್ಮಯ್ಯನವರಿಗೂ ಪತ್ರ ನೋಡಿ ಸಂತೋಷವೇ ಆಯಿತು. ಶಾಮುನು ಕೆಲಸದಲ್ಲಿರುವವರಿವಿಗೂ ಅವನೊಬ್ಬ ನೌಕರನೆಂಬ ಭಾವನೆಯನ್ನೇ ಅವರು ತಾಳಿದ್ದರೂ, ಅವನು ಬಿಟ್ಟುಹೋದ ಮೇಲೆ ಅವನ ಸಾಮರ್ಥ್ಯವೂ, ಶಕ್ತಿಯೂ, ನಿಸ್ಪೃಹತೆಯೂ ಚೆನ್ನಾಗಿ ಮನದಟ್ಟಾಗಿತ್ತು. ರಘುವಿನ ಗುಣವು ತಿಳಿದಮೇಲಂತೂ ದೊಡ್ಡಸ್ತಿಕೆ ಇರುವುದು ಒಳ್ಳೆಯ ಮನೆತನದಲ್ಲಿ, ವಂಶದಲ್ಲಿ, ಮಾತ್ರವೇ ಅಲ್ಲ. ಸಾಮಾನ್ಯರಲ್ಲೂ ಇರುತ್ತದೆಂಬ ಸದಭಿಪ್ರಾಯವು ಅವರಿಗೆ ಬಂದಿತ್ತು. ಕಮಲಳು ಒಪ್ಪುವಂತಿದ್ದರೆ ತಮ್ಮ ಮಾತೇನೂ ಇಲ್ಲವೆಂದು ತಮ್ಮಯ್ಯನವರು ರಾಮುವಿಗೆ ಪತ್ರ ಬರೆದರು.

ಕೇವಲ ಒಂದು ವಾರ ಕಳೆಯುವುದರೊಳಗೆ ಶಾಮುನು ರಾಮುವಿನ ಮನೆಯಲ್ಲಿ ಮೊದಲು ನಡೆದುಕೊಳ್ಳುತ್ತಿದ್ದಂತೆ ಮಾತೂ ಕಥೆಗಳನ್ನು ಆಡಲಾರಂಭಿಸಿದ. ಕಮಲಳಿಗೂ ಶಾಮುನು ಹೊರಗಿನವನೆಂಬ ಭಾವನೆಯು ದೂರ

ವಾಯಿತು. ಈ ಅಲ್ಪಕಾಲದಲ್ಲಿ ಅವನು ಮಾಡಿದ ನಾನಾ ಕೆಲಸಗಳನ್ನೂ, ಕಂಡ ನ್ಯೂನತೆಗಳನ್ನೂ, ಕೇಳಿದಮೇಲೆ ರಾಮುವಿಗೂ ಕಮಲಳಿಗೂ ಅವನಿಗೆ ಬಂದಿರುವ ಪ್ರಪಂಚ ಜ್ಞಾನದ ಅರಿವಾಯಿತು. ಕಿಟ್ಟು ರಾಮುವಿನಲ್ಲಿ ಸ್ನೇಹ ಭಾವವು ಚೆನ್ನಾಗಿ ಬೆಳೆಯಿತು. ಕಿಟ್ಟುವು ಸಹಾ ಆಗಾಗ ರಾಮುವಿನ ಮನೆಗೆ ಬಂದು ಹೋಗುತ್ತಿದ್ದ. ಶಾಮುನಿಗೆ ಅತ್ಯಂತ ಕಷ್ಟಕಾಲದಲ್ಲಿ ಸಹಾಯಮಾಡಿ, ಒಬ್ಬ ಬಂಧುವಿನೋಪಾದಿಯಲ್ಲಿ ಕಿಟ್ಟುವು ಸ್ನೇಹಭಾವ ವನ್ನು ವ್ಯಕ್ತಪಡಿಸುತ್ತಿರುವನೆಂದು ತಿಳಿದಮೇಲಂತೂ, ರಾಮುವಿಗೆ ಅವನ ಮೇಲೆ ವಿಶ್ವಾಸವು ಇಮ್ಮಡಿಯಾಯಿತು. ಶಾಮುನು ಕಿಟ್ಟುವಿನ ಕೋಣೆ ಯಲ್ಲೇ ಇದ್ದರೂ ರಾಮುವಿನ ಮನೆಗೂ ಬೇಸರವನ್ನು ಕಳೆಯಲು ಆಗಾಗ ಹೋಗಿಬರುತ್ತಿದ್ದ. ಮನೆಗೆ ಬಂದಾಗಲೆಲ್ಲಾ ಮಾತು ಎಡೆಬಿಡದೆ, ಇಲ್ಲದೆ ಮೂವರಲ್ಲೂ ಸಾಗುತ್ತಿತ್ತು. ಸೀತಮ್ಮನವರ ಆಕಾಂಕ್ಷೆ, ಅಣ್ಣ ತಂಗಿಯರು ತಂದೆಗೆ ನೇರವಾಗಿ ತಮ್ಮಿಷ್ಟವನ್ನು ತಿಳಿಸದೆ ಪಟ್ಟ ಶ್ರಮ, ತೊಂದರೆ, ಎಲ್ಲವೂ ವಿಶದವಾಗಿ ಶಾಮುನಿಗೂ ತಿಳಿಯಿತು. ಸೀತಮ್ಮನವರು ಎಷ್ಟೇ ಸ್ವಾರ್ಥಕ್ಕಾಗಿ ಪ್ರಯತ್ನಪಟ್ಟಿದ್ದರೂ ಶಾಮುನು ಅವರನ್ನು ದೂಷಿಸಲಿಲ್ಲ. ಅವರ ಬಾಯಿಂದ ಕಮಲಳ ಮನಸ್ಸು ಕೆಡುವಂತೆ, " ಶಾಮುನೊಬ್ಬ ಗುಮಾಸ್ತ " ಎಂಬ ಮಾತು ಗಳು ಬರುತ್ತಿದ್ದವೆಂದೂ ಶಾಮುನಿಗೆ ತಿಳಿಯಿತು. ಅದಕ್ಕೆ ಅವನು ಅಸಮಾ ಧಾನವನ್ನು ಪಟ್ಟುಕೊಳ್ಳಲಿಲ್ಲ. ತಾನು ಗುಮಾಸ್ತನಾಗಿದ್ದುದು ನಿಜ, ಉನ್ನತ ವಂಶದಲ್ಲಿ ಜನಿಸದಿರುವುದೂ ದಿಟ ಅಂದಮೇಲೆ ಇದ್ದುದನ್ನು ವಾಸ್ತವ ವಾಗಿ ಹೇಳಿದರೆ ಅದರಲ್ಲಿ ತಪ್ಪೇನು ಎಂದು ರಾಮುವಿನೊಡನೆ ಅನೇಕಸಾರಿ ಚರ್ಚೆಮಾಡಿದ. ಎಷ್ಟು ಮಾತಾಡಿದರೂ, ಏನು ಹೇಳಿದರೂ ಶಾಮುನು ಕೆಲಸ ಬಿಟ್ಟುಹೋಗಿದ್ದನ್ನು ರಾಮುವು ಒಪ್ಪಲಿಲ್ಲ. ಈ ವಿಷಯದಲ್ಲಿ ಮಾತ್ರ ಶಾಮುನು ಸರಿಯಾದ ಮಾರ್ಗವನ್ನು ಹಿಡಿಯಲಿಲ್ಲವೆಂಬುದೇ ಅವನ ಅಭಿ ಪ್ರಾಯವಾಗಿತ್ತು. ಹಾಗೆ ಬಿಟ್ಟುಬರಲು ಕಾರಣ ತಮ್ಮಯ್ಯನವರಲ್ಲಿ ಆಗಿದ್ದ ಮಾರ್ಪಾಡು, ಮತ್ತು ಮನೆಯಲ್ಲಿ ಕಮಲಳು ಸೀತಮ್ಮನವರು ತೋರಿದ ಅನಾದರವೆಂದು ಶಾಮುನು ರಾಮುವಿಗೆ ತಿಳಿಸಲೇಬೇಕಾಯಿತು. ಈ ಮಧ್ಯೆ ಶಾಮುನು ಪಟೇಲರ ಮಗಳೊಂದಿಗೆ ಮಾತಾಡಿದ್ದೂ ರಾಮುವಿನಿಂದ ಪ್ರಸ್ತಾಪಿಸ ಲ್ಪಟ್ಟಿತು. ನಡೆದ ವಿಷಯವನ್ನೂ ಸಂದರ್ಭವನ್ನೂ ತಾನು ಯಾಕೆ ಹಾಗೆ

ಮಾತಾಡಿದೆನೆಂಬುದನ್ನೂ ಶಾಮನು ತಿಳಿಸಿದಮೇಲೆ ಕಮಲಳಿಗೆ ಅದೊಂದು ಸೀತಮ್ಮನವರ ಉಪಾಯವೆಂದು ತೋರಿತು. ರಾಮುವಿಗೇನೊ ಈ ವಿಷಯ ದಲ್ಲಿ ಅನುಮಾನವೇ ಇರಲಿಲ್ಲ.

ಕಿಟ್ಟುವಿನ ಕಾರ್ಯವು ಮುಗಿದುದರಿಂದ ಅವನ ತಂದೆಯವರು ಹಳ್ಳಿಗೆ ಬರಬೇಕೆಂದೂ, ಮತ್ತು ಕೇವಲ ಒಂದು ವಾರದೊಳಗೆ ಶಾಂತಿಪ್ರಸ್ತವು ಏರ್ಪಡಿಸಲಾಗಿದೆಯೆಂದೂ ಬರೆದರು. ಮದರಾಸಿನಲ್ಲಿ ಒಂಟಿ ಜೀವನ ಅನೇಕ ವರ್ಷಗಳಿಂದ ನಡೆಸಿ ಕಿಟ್ಟುವಿಗೂ ಬೇಸರವಾಗಿತ್ತು. ಕಾಗದವನ್ನು ಶಾಮನಿಗೆ ತೋರಿಸಿ, ತನ್ನ ಊರಿಗೆ ಬರಲೇಬೇಕೆಂದು ಬಲವಂತಮಾಡಿದ ಅದೇ ದಿನ ಸಂಜೆ ಕಿಟ್ಟುವು ರಾಮುವಿನ ಮನೆಗೆ ಬಂದು ಅವರಿಬ್ಬರನ್ನು ತನ್ನ ತಂದೆಯ ಊರಿಗೆ ಖಂಡಿತ ಬರಬೇಕೆಂದೂ, ತಮ್ಮ ಮನೆಯಲ್ಲಿ ಹಬ್ಬವೊಂದು ನಡೆಯ ಲಿದೆಯೆಂದೂ ಹೇಳಿ, ಶಾಮನಿಗೂ ಅವರಿಬ್ಬರನ್ನು ಕರೆತರುವಂತೆ ಒತ್ತಾಯ ಪಡಿಸಿದ. ಸ್ನೇಹವು ಚೆನ್ನಾಗಿ ಬೆಳೆದಿದ್ದುದರಿಂದ ರಾಮುವು ತಂಗಿಯೊಡನೆ ಬರುತ್ತೇನೆಂದು ಮಾತು ಕೊಡಲೇಬೇಕಾಯಿತು. ಸಾಹಿತ್ಯ, ಸಂಘ, ಕಾವ್ಯ, ನಾಟಕ ಎಂದು ಪದಗಳ ವಾತಾವರಣದಲ್ಲಿ ಮುಳುಗೇಳುತ್ತಿದ್ದ ಶಾಮನೂ ಒಂದೆರಡು ದಿನವಾದರೂ ನಿರ್ಯೋಚನೆಯಿಂದ ಕಾಲ ತಳ್ಳಬಹುದೆಂದು ಯೋಚಿಸಿ, ಸಂಘದ ಅಧ್ಯಕ್ಷರಿಗೆ ರಜಾ ಬೇಕೆಂದು ಬರೆದು ತಿಳಿಸಿದ. ಯಾವ ಸರ್ಕಾರಿ ಕಚೇರಿಯಲ್ಲೂ ಅನುಸರಿಸದ ನಿಯಮದಂತೆ, ಅಧ್ಯಕ್ಷರು ಶಾಮನನ್ನು ಕರೆದು ರಜಾ ಕೊಡಲಾಗುವುದಿಲ್ಲವೆಂದು ತಿಳಿಸಿದರು. ಶಾಮನು ನಿಧಾನವಾಗಿ ಅವರನ್ನು ನೋಡಿ, "ಸ್ವಾಮಿ, ನೌಕರರಾದ ಮಾತ್ರಕ್ಕೆ ಅವರಿಗೂ ಸ್ವಂತ ಕೆಲಸಕಾರ್ಯಗಳಿರುವುದಿಲ್ಲವೇ. ಅಗತ್ಯವಾಗಿ ಬೇಕಾಗಿರುವುದರಿಂದ ಕೇಳಿ ದ್ದೇನೆ. ಇದರಮೇಲೆ ನಿಮ್ಮಿಷ್ಟ. ನಾನೇನೋ ನಾಲ್ಕು ದಿನ ಊರಲ್ಲಿರು ವುದಿಲ್ಲ" ಎಂದು ಹೇಳಿ ರಾಮುವಿನ ಮನೆಗೆ ನೇರವಾಗಿ ಬಂದು ನಡೆದ ಸಮಾಚಾರವನ್ನು ತಿಳಿಸಿದ. "ಯಾಕೆ, ಈ ಕೆಲಸಕ್ಕೆ ಒದ್ದಾಡುತ್ತೀಯಪ್ಪಾ. ನನಗೇನೋ ಅರ್ಥವಾಗಿಲ್ಲ ಈಗಲೂ ಮಂಗಳೂರಿಗೆ ಹೋಗಬಹುದಲ್ಲಾ" ಎಂದು ರಾಮುವು ಹೇಳುತ್ತಲು, ಶಾಮನು, "ಅಲ್ಲಯ್ಯಾ, ಅಂದಹಾಗೆ ನೀನ್ಯಾಕೆ ಈ ಸರ್ಕಾರಿ ಕೆಲಸದಲ್ಲಿ ಸಿಕ್ಕು ಒದ್ದಾಡುತ್ತೀಯೆ. ನಿನ್ನ ತಂದೆಯ ಜತೆಯಲ್ಲಿ ಅವರು ಮಾಡುತ್ತಿರುವ ಕಾರ್ಯವನ್ನೇ ಮಾಡ

ಬೇಕಾದ್ದು ನ್ಯಾಯುವಾದುದಲ್ಲವೇ?" ಎಂದು ಪ್ರಶ್ನಿಸಿದ. ಆ ಕೆಲಸದಲ್ಲಿ ತನಗಿಷ್ಟವೆಂದೂ, ಅದು ಬೇಸರವಾದುದೆಂದೂ, ಸರ್ಕಾರಿ ನೌಕರಿಯಲ್ಲಿರುವ ಮಾನಮರ್ಯಾದೆಗಳು ಕೇವಲ ವ್ಯಾಪಾರ ವಾಣಿಜ್ಯಗಳಲ್ಲಿಲ್ಲವೆಂದೂ ರಾಮುವು ಅನ್ನ ಅಭಿಪ್ರಾಯವನ್ನು ಹೊರಗೆಡಹಿದ ಶಾಮನಿಗೆ ವ್ಯಥೆಯುಂಟಾಯಿತು. "ನಮ್ಮ ಜನ ಹಾಳಾಗುತ್ತಿರುವುದು ಹೀಗೆಯೇ. ಕೆಲಸದಲ್ಲಿ ಮೇಲು, ಕೀಳು, ಮಾನ, ಮರ್ಯಾದೆ ಅಂದರೆ ಏನು ರಾಮು. ಅಲ್ಲಿ ಸಾವಿರ ರೂಪಾಯಿ ದುಡಿಯಬಲ್ಲ ಮಾರ್ಗವಿದ್ದರೂ, ಇಲ್ಲಿ ಇನ್ನೂರು ರೂಪಾಯಿಗಳೇ ಹೆಚ್ಚಿನದೆಂದು ಭಾವಿಸಿದ್ದೀಯಲ್ಲಾ, ಇದು ಸರಿಯೇ. ವ್ಯಾಪಾರ ಸ್ವತಂತ್ರವಾದುದು. ಹಣ ಗಳಿಸುವುದು, ಅಭಿವೃದ್ಧಿ ಹೊಂದುವುದು ಮಾಡುವವರ ಕೈಲಿದೆ ಇಲ್ಲಿ ಮಾನ ಮರ್ಯಾದೆ ಇದೆ ಎಂದು ನೀನು ಭ್ರಮಿಸಿರಬಹುದು. ಆದರೆ ಎಳ್ಳಷ್ಟೂ ಇಲ್ಲ" ಎಂದು ಶಾಮನು ರಾಮುವಿನ ಮನಸ್ಸಿಗೆ ಆಲೋಚನೆಯನ್ನುಂಟುಮಾಡಿದ.

ಕಮಲಳಿಗೆ ಮನೆಬಿಟ್ಟು ಹೊರಡಲು ಇಷ್ಟವಿಲ್ಲದಿದ್ದರೂ ರಾಮುವು ಮಾತುಕೊಟ್ಟದ್ದರಿಂದಲೂ, ಒಂದೆರಡು ದಿನಗಳಾದರೂ ನಗುನಗುತಾ ಕಾಲ ಕಳೆಯಬಹುದೆಂದು ಶಾಮನು ಸೂಚಿಸಿದುದರಿಂದಲೂ ಕಿಟ್ಟುವಿನ ಊರಿಗೆ ಪ್ರಯಾಣ ಮಾಡಬೇಕಾಯಿತು. ಮಾರನಹಳ್ಳಿಯಲ್ಲಿ ಅಕ್ಕಪಕ್ಕದ ಜನ ಅಂದುಕೊಳ್ಳುತ್ತಿದ್ದಂತೆ ಈ ಹಳ್ಳಿಯಲ್ಲೂ ಎಲ್ಲಿ ಮಾತಾಡುತ್ತಾರೋ ಎಂಬ ಅನುಮಾನ ಕಮಲಳಿಗೆ ಇದ್ದೇ ಇತ್ತು. ಆದರೆ ಕಿಟ್ಟುವಿನ ಮನೆಯವರು ಬಂದ ಸ್ನೇಹಿತರನ್ನೆಲ್ಲಾ ಆದರ ವಿಶ್ವಾಸಗಳಿಂದ ನೋಡಿಕೊಂಡರು. ಕಿಟ್ಟುವಿನ ತಂಗಿ, ಹೆಂಡತಿಯರಿಗೆ, ಕಮಲಳಲ್ಲಿ ಬಹು ಬೇಗ ಸ್ನೇಹವೂ ಸಲಿಗೆಯೂ ಉಂಟಾಗಿ, ಕೇವಲ ಒಂದೆರಡು ದಿನದಲ್ಲಿಯೇ ಕಮಲಳು "ಶಾಮನ ಹೆಂಡತಿ" ಎಂದು ಹಾಸ್ಯಕ್ಕೆ ಒಳಗಾದಳು ಕಿಟ್ಟುವಿನ ತಂದೆಯವರೂ ಸಹಾ ರಾಮುವು ತನ್ನೊಡನಿದ್ದ ಸಮಯದಲ್ಲಿ ಶಾಮನನ್ನು ಕರೆದು "ಏನಯ್ಯಾ, ಇನ್ನೂ ಸಮಾಜ, ಸುಧಾರಣೆ, ಸೇವೆ ಎಂದು ಕುಳಿತಿದ್ದೀಯೊ ಅಥವಾ ವಿವಾಹದ ಯೋಚನೆಯನ್ನೇನಾದರೂ ಮಾಡಿದ್ದೀಯೊ" ಎಂದು ಪ್ರಶ್ನಿಸಿದರು. ಶಾಮನಿಗೆ ಕೂಡಲೆ ಉತ್ತರ ಹೇಳಲು ತೋಚಲಿಲ್ಲ. "ನಿಲ್ಲುವುದಕ್ಕೆ ಒಂದು ಸ್ಥಳ, ತಿನ್ನುವುದಕ್ಕೆ ಆಹಾರ, ಎರಡೂ ಇಲ್ಲದ ನನಗೆ ಸಂಸಾರವೊಂದು ಬೇಕೆ"

ಶಾಮನು ನಗುತ್ತಾ ಹೇಳಿದ. ಅದಕ್ಕೆ ಅವರು “ಅದನ್ನೆಲ್ಲಾ ನಾವು ನೋಡಿ ಕೊಳ್ಳುತ್ತೇವೆ, ನಿನಗ್ಯಾಕೆ. ಮದುವೆಯಾಗಲು ಇಷ್ಟವಿದೆಯೋ” ಎಂದು ಪುನಃ ಪ್ರಶ್ನಿಸಿದರು. ಅಷ್ಟು ಹೊತ್ತಿಗೆ ಕಿಟ್ಟುವು ಒಳಗಿನಿಂದ ಬಂದು ಸೇರಿದ. ಮಾತು ಗಳು ಯಥೇಚ್ಛವಾಗಿ ನಡೆದು ಕೊನೆಗೆ ಸದ್ಯದಲ್ಲಿ ವಿವಾಹದ ಯೋಚನೆಯಿಲ್ಲ ವೆಂದೇ ಶಾಮನು ಅಭಿಪ್ರಾಯವನ್ನು ಹೇಳುತ್ತಲು, ಕಿಟ್ಟುವು “ಅಲ್ಲಯ್ಯ, ವಯಸ್ಸಾದಮೇಲೆ ಪ್ರಕೃತಿಯ ನಿಯಮದಂತೆ ಲಗ್ನವಾಗಬೇಕಾದ್ದು ಪ್ರತಿ ಯೊಬ್ಬ ಮನುಷ್ಯನ ಕರ್ತವ್ಯವಲ್ಲವೇ” ಎಂದು ಪ್ರಶ್ನಿಸಿದ. ಶಾಮನಿಗೆ ಉತ್ತರ ಕೊಡುವ ಆವಶ್ಯಕ ಕಂಡುಬರಲಿಲ್ಲ ಪ್ರಕೃತಿಯ ನಿಯಮಗಳಿಗೆ, ಸಮಾಜದ ಕಾನೂನುಗಳಿಗೆ ಅವನೆಂದಿಗೂ ವಿರುದ್ಧಹೋದವನಲ್ಲ. ಆದರೆ ಇದೇ ನಿಯಮ, ಕಾನೂನು ಎಂದು ಹೇಳಿ ಮಾಡುವುದೆಂದಾದಾಗ ಅದಕ್ಕೆ ಶಾಮನ ಮನಸ್ಸು ಬೇಸರಗೊಳ್ಳುತ್ತಿತ್ತು. ಶಾಮನ ಅಭಿಪ್ರಾಯವನ್ನು ಕೇಳಿದ ಕಮ ಲಳ ಮನಸ್ಸು ಕೊರಗಿತೆಂದು ಹೇಳಬೇಕಾಗಿಲ್ಲ. ಮದರಾಸಿನಲ್ಲಿ ಅವನನ್ನು ಕಂಡು, ಹಿಂದೆ ಆಕೆಯ ಮನಸ್ಸಿಗೆ ಅನುಮಾನಬಂದಿದ್ದ ವಿಷಯಗಳಮೇಲಿನ ಕಾರಣವನ್ನು ಅವನ ಬಾಯಿಂದಲೇ ಕೇಳಿದನಂತರ, ಮತ್ತು ಸೀತಮ್ಮನವರ ಹೃದಯವು ಸ್ಪಷ್ಟವಾದಮೇಲೆ, ಅವಳಿಗೆ ಶಾಮನಮೇಲಿನ ವಿಶ್ವಾಸವು ಪ್ರೇಮಕ್ಕೆ ತಿರುಗಿದುದು ಸಹಜವೇ ಹೌದು. ಇದರ ಜತೆಗೆ ರಾಮುವಿನ ಇಷ್ಟವೂ ಕಮಲಳು ಶಾಮನನ್ನು ಪ್ರೀತಿಸಬೇಕೆನ್ನುವುದೇ ಆಗಿತ್ತು. ಶಾಮನು ಒಬ್ಬ ಬಡವ, ಹೇಳಿಕೊಳ್ಳುವಂತಹ ದೊಡ್ಡ ವಂಶದಲ್ಲಿ ಜನಿಸಿದವನಲ್ಲಾ ಎಂಬುದು ಅವರಿಗೆ ಮೊದಲಿನಿಂದಲೂ ತಿಳಿದಿತ್ತು. ಆದರೆ ಈ ಸಾಮಾಜಿಕ ದೃಷ್ಟಿಯನ್ನು ಬದಿಗೊತ್ತಿ, ನೋಡಿದರೆ ಶಾಮನ ಹೃದಯ ವಿಶಾಲವಾದುದು, ಗುಣವುಳ್ಳದ್ದು ಎಂಬ ಅಭಿಪ್ರಾಯಗಳು ಯಾರಿಗಾದರೂ ಬರಲೇಬೇಕೆನ್ನು ವುದು ರಾಮುವಿನ ಸ್ಪಷ್ಟವಾದ ಅಭಿಮತ. ಇದನ್ನು ಅನೇಕ ವೇಳೆ ಕಮಲ ಳಿಗೂ ಹೇಳಿದ್ದ. ಐಶ್ವರ್ಯ, ಅಂತಸ್ತು, ಗೌರವ ಇವುಗಳನ್ನು ಸಂಪಾದಿಸ ಬಹುದು. ಸರಳ ಹೃದಯ, ವಿಶಾಲದೃಷ್ಟಿ, ನಿಷ್ಕಲ್ಮಷ ಮನಸ್ಸು, ತ್ಯಾಗ ಬುದ್ಧಿ ಮುಂತಾದ ಗುಣಗಳು ಹುಟ್ಟಿನಿಂದಲೇ ಬರಬೇಕು ಎಂಬುದಾಗಿಯೂ, ರಾಮುವು ತನ್ನ ತಂಗಿಗೆ ಹೇಳುತ್ತಲೇ ಇದ್ದ ಈ ಎಲ್ಲಾ ಸನ್ನಿವೇಶಗಳಿಂದಲೂ ಹಿಂದೆ ತನಗಾದ ಅಪಮಾನದಿಂದಲೂ, ಕಮಲಳ ಮನಸ್ಸು ಬದಲಾಯಿಸಿ,

ಕ್ರಮೇಣ ಶಾಮುನ ಕಡೆಗೆ ವಾಲಿತ್ತು. ಶಾಮನು ಒಪ್ಪಿದರೆ ಕಮಲಳು ಹೂಗುಟ್ಟುವುದು ಕಷ್ಟವಲ್ಲ ಎಂದು ರಾಮುವಿಗೆ ಅವಳ ನಡತೆಯಿಂದ ಚೆನ್ನಾಗಿ ನಂಬಿಕೆಯುಂಟಾಗಿತ್ತು. ಶಾಮನು ಸದ್ಯದಲ್ಲಿ ವಿವಾಹವಾಗಲು ಒಪ್ಪುವುದಿಲ್ಲವೆಂದು ತಿಳಿದು ರಾಮುವಿಗೂ ಮನನೊಂದಿತು. ಆದರೆ ಇದರಿಂದ ಸ್ನೇಹದ ವಿಶ್ವಾಸವು ಎಳ್ಳಷ್ಟೂ ಕಮ್ಮಿಯಾಗಲಿಲ್ಲ. ಮದ ರಾಸಿಗೆ ಎಲ್ಲರೂ ಹಿಂದಿರುಗಿದನಂತರ, ಅದೇ ರಾತ್ರಿ ಊಟಮಾಡುತ್ತಾ ಕುಳಿತಿರುವಾಗ ರಾಮುವು ಶಾಮನನ್ನು ಪುನಃ ಪ್ರಶ್ನಿಸಿದ. ಆದರೆ ಅವನು ಹೆಣ್ಣು ಕೊಟ್ಟವರಿಂದ ದಾನರೂಪವಾಗಿ ಹಣ ಪಡೆದು ಜೀವನ ನಡೆಸು-ವುದಕ್ಕಿಂತ ಅಧಮ ಕೆಲಸ ಬೇರೊಂದಿಲ್ಲವೆಂದು ತನ್ನ ಅಭಿಮತವನ್ನು ತಿಳಿಸುತ್ತಲೂ, "ಕೊಡುವ ಶಕ್ತಿಯಿದ್ದವರು ಕೊಟ್ಟರೆ ತಪ್ಪೇನು? ಶಕ್ತಿಯಿಲ್ಲ ದವರನ್ನು ಪೀಡಿಸಿ ಪಡೆಯುವುದಕ್ಕೆ ನೀನು ಹೇಳಿದ್ದು ಅನ್ವಯಿಸುತ್ತದೆ; ಇತರರಿಗಲ್ಲ" ಎಂದು ರಾಮುವು ಮಾತನ್ನು ತಿರುಗಿಸಿದ. "ಅಂತಹ ಪುಣ್ಯಾತ್ಮರು ಯಾರಿದ್ದಾರಪ್ಪಾ. ಹಾಗೆ ಒಂದು ವೇಳೆ ಆಕಸ್ಮಾತ್ತಾಗಿ ಯಾರಾದರೂ ಇದ್ದಾರೆಂದು ನಂಬಿದರೂ ಆಗ ಅಂತಸ್ತು, ಗೌರವದ ಪ್ರಶ್ನೆ ಇಲ್ಲದಿರುತ್ತದೆಯೇ" ಶಾಮನು ನಗುತ್ತಾ ರಾಮುವಿಗೆ ಉತ್ತರ ಹೇಳಿದ. "ಯಾವ ಪ್ರಶ್ನೆಯೂ ಬಾರದೆ, ನೀನು ಹೇಳಿದ ರೀತಿಯ ಮನುಷ್ಯರಿದ್ದು, ಹೆಣ್ಣು ಕೊಡಲು ಒಪ್ಪಿದರೆ, ಆಗ" ರಾಮುವು ಕೇಳಿದ. "ಆಗ, ಹುಡುಗಿ ಕುಂಟೋ, ಕುರುಡೋ ಆಗಿರಲೇ ಬೇಕು" ಶಾಮನು ಪುನಃ ನಗುತ್ತಾ ತಿಳಿಸಿದ. "ಹಾಗೇನೂ ಇಲ್ಲದೆ, ಸರಿಯಾದ ಜಾಗದಲ್ಲಿ ಹೆಣ್ಣು ದೊರೆತರೆ ಆಗಲಾದರೂ ಒಪ್ಪುತ್ತೀಯಾ" ಎಂದು ರಾಮುವು ಕೇಳುತ್ತಲು ಶಾಮನು ಉತ್ತರವನ್ನು ಕೊಡಲಿಲ್ಲ.

೩

ಮಾರನೆಯ ದಿನ ರಾಮುವು ತಂದೆಗೆ ಕಾಗದ ಬರೆದು ಒಂದು ದಿನದ ಮಟ್ಟಿಗಾದರೂ ಮದರಾಸಿಗೆ ಬಂದು ಹೋಗಬೇಕೆಂದು ತಿಳಿಸಿದ. ತಮ್ಮಯ್ಯನವರಿಗಾದರೋ ಒಂದು ನಿಮಿಷವೂ ವಿರಾಮವಿರಲಿಲ್ಲ. ಕೈಯೊಳಗಿದ್ದ ಅನೇಕ ಉದ್ಯಮಗಳು ನಿಂತುಹೋಗಿದ್ದವು ಪದಾರ್ಥಗಳ ಬೆಲೆ ಏರುತ್ತಿದ್ದಂತೆ, ಕೂಲಿಗಾರರು ಹೆಚ್ಚು ವೇತನಕ್ಕೆ ಬಲವಂತಮಾಡುತ್ತಿದ್ದರು. ತಮ್ಮಯ್ಯ

ನವರು ಮನಸ್ಸಿಗೆ ಸರಿದೋರಿದಷ್ಟು ಹೆಚ್ಚು ಮಾಡಿದ್ದರೂ, ಅವರ ಕೆಲಸ ಗಾರರಲ್ಲಿ ಅಸಮಾಧಾನವು ಪೂರ್ತಿಯಾಗಿ ಹೋಗಿರಲಿಲ್ಲ. ಇನ್ನೂ ಹೆಚ್ಚು ಮಾಡಿದರೆ ಬಹಳ ನಷ್ಟವಾಗುತ್ತದೆಂದು ಭಾವಿಸಿ, ತಮ್ಮಯ್ಯನವರು ಬಿಗಿ ಹಿಡಿದಿದ್ದರು. ಆದರೆ ಕೂಲಿಯವರೆಲ್ಲಾ ಒಗ್ಗಟ್ಟಾಗಿ, ಒಮ್ಮತದಿಂದ ಸಂಬಳ ವನ್ನು ದ್ವಿಗುಣಿಸಿದರೆ ಮಾತ್ರ ಕೆಲಸಮಾಡುವುದಾಗಿ ಬೆದರಿಕೆ ಹಾಕಿದ್ದರಿಂದ, ತಮ್ಮಯ್ಯನವರು ಅನೇಕ ಸಂಸ್ಥೆಗಳನ್ನು ಮುಚ್ಚಲೇಬೇಕಾಯಿತು. ಒಬ್ಬ ರಾದನಂತರ ಮತ್ತೊಬ್ಬರು ತಮ್ಮಯ್ಯನವರ ಬಳಿ ಕೆಲಸವನ್ನು ತ್ಯಜಿಸಲು ಆರಂಭಿಸಿದರು. ಬೇರೆ ಊರುಗಳಿಂದ ಕೂಲಿಯವರನ್ನು ತರಲು ಅವರು ಪಟ್ಟ ಪ್ರಯತ್ನಗಳೆಲ್ಲಾ ನಿಷ್ಫಲವಾಯಿತು. ದಿಕ್ಕೇ ತೋಚದೆ ತಮ್ಮಯ್ಯನವರೂ ಸಹ ಬಂಡವಾಳಗಾರರು ಏರ್ಪಡಿಸಿಕೊಂಡಿದ್ದ ಸಂಘಕ್ಕೆ ಸೇರಿ, ಅವರೆಲ್ಲರೂ ಮಾಡಿದ್ದಂತೆ, ತಮ್ಮ ವಾಣಿಜ್ಯ ಸಂಸ್ಥೆಗಳನ್ನೆಲ್ಲಾ ಮುಚ್ಚಿಯೇಬಿಟ್ಟರು. ಕೆಲಸವು ಯಾವುದೂ ನಡೆಯುದಿದ್ದಾಗಲೇ, ತಮ್ಮಯ್ಯನವರ ಓಡಾಟ, ಯೋಚನೆ, ಕೊರಗು ಅಧಿಕವಾಗಿತ್ತು. ಪ್ರತಿ ನಿಮಿಷವೂ ವಿರಾಮವಿಲ್ಲದಂತೆ ಸುತ್ತಿ ಸುತ್ತಿ, ಪುನಃ ಸಂಸ್ಥೆಗಳು ಪ್ರಾರಂಭವಾಗುವ ಸೂಚನೆಯಿದೆಯೇ ಎಂದು ತವಕಪಡುತ್ತಿದ್ದರು. ಈ ಸಮಯದಲ್ಲೇ ರಾಮುವಿನಿಂದ ಅವರಿಗೆ ಕಾಗದ ಬಂದಿದ್ದು. ಏನೋ ವಿಶೇಷವಿರಲೇಬೇಕೆಂದು ಅವರಿಗೆ ತೋಚಿತು. ಸದ್ಯದ ಪರಿಸ್ಥಿತಿಯಲ್ಲಿ ಊರನ್ನು ಬಿಟ್ಟುಹೋಗಲು ಇಷ್ಟವಿಲ್ಲದಿದ್ದರೂ, ತಮ್ಮಯ್ಯ ನವರು ಒಂದು ದಿನದ ಮಟ್ಟಿಗೆ ಮದರಾಸಿನಲ್ಲಿರಬೇಕೆಂದು ತೀರ್ಮಾನಿಸಿ, ಪ್ರಯಾಣ ಸನ್ನದ್ಧರಾದರು ರಾಮುವು ಹಾಗೆ ಕಾಗದ ಬರೆಯಲು ಕಾರಣ ವೇನೆಂಬುದನ್ನು ತಿಳಿದಮೇಲೆ ತಮ್ಮಯ್ಯನವರ ಮನಸ್ಸಿಗೆ ಸಮಾಧಾನವೇ ಆಯಿತು. ಕಮಲಳನ್ನು ಕರೆದು ಅವಳ ಮನಸ್ಸೇನೆಂದು ಸಹಾ ಕೇಳಿದರು. ಕಮಲಳು ಯಾವ ಸ್ಪಷ್ಟ ಉತ್ತರವನ್ನೂ ಕೊಡದೆ ರಾಮುವು ಹೇಳಿದಂತೆ ನಡೆಯುವುದಾಗಿ ಭರವಸೆಯಿತ್ತಳು. ಎಂದಿನಂತೆ ಆ ಸಂಜೆಯೂ ಶಾಮನು ರಾಮುವಿನ ಮನೆಗೆ ಬಂದ. ತಮ್ಮಯ್ಯನವರನ್ನು ನೋಡಿ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಪುನಃಪುನಃ ತಮ್ಮಯ್ಯನವರು ಮಾಡಿದ ಉಪಕಾರ ವನ್ನು ಸ್ಮರಿಸಿಕೊಂಡು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ. ತಮ್ಮಯ್ಯ ನವರು ಮಾರನೆಯ ದಿನದ ಬೆಳಗ್ಗೆ ಮಂಗಳೂರಿಗೆ ಹಿಂದಿರುಗಬೇಕಾಗಿದ್ದುದ

ರಿಂದ, ಆ ರಾತ್ರಿ ಶಾಮುನನ್ನು ಊಟಕ್ಕೆ ಅಲ್ಲಿಗೇ ಬರುವಂತೆ ತಿಳಿಸಿದರು. ರಾಮುವು ಕಿಟ್ಟುವನ್ನೂ, ಅವನ ಹೆಂಡತಿಯನ್ನೂ ಕರೆತರುವಂತೆ ಶಾಮುನಿಗೆ ಹೇಳಿ, ತಾನೂ ಸಹ ಜವಾನನನ್ನು ಕಳುಹಿಸಿದ.

ಊಟವಾದಮೇಲೆ ಎಲ್ಲರೂ ಕುಳಿತಿರುವಾಗ ತಮ್ಮಯ್ಯನವರು ವಿಷಯದ ಪ್ರಸ್ತಾವನೆ ಮಾಡಿದರು. ಕಿಟ್ಟುವಿನ ತಂದೆಗೆ ಉತ್ತರ ಕೊಟ್ಟಂತೆಯೇ ಶಾಮುನುವಾದಿಸಿದ. ರಾಮು ಮತ್ತು ಕಿಟ್ಟು ತಮ್ಮ ಅಭಿಪ್ರಾಯಗಳನ್ನು ಹೊರ ಗೆಡಹಿದರು. "ಹೆಣ್ಣು ತಂದನಂತರ ಅವರ ಮನೆಯವರ ಸಹಾಯದಿಂದ ಜೀವನ ನಡೆಸುವುದು ಗಂಡಸಿಗೆ ಭೂಷಣವಲ್ಲ" ಎಂಬುದೇ ಶಾಮುನ ಅಭಿಮತ ವಾಗಿತ್ತು. ಅವನ ಮನಸ್ಸು ಬದಲಾಯಿಸುವಂತೆಯೇ ತೋರಲಿಲ್ಲ. ಆಗ ರಾಮುವು ಮಧ್ಯೆ ಮಾತಾಡಿ ಸನ್ನಿವೇಶವನ್ನು ಸುಲಭವಾಗಿ ತಿರುಗಿಸಿದ. "ನನ್ನ ತಂದೆಯವರಂತೆ ನಾನೂ ವಾಣಿಜ್ಯ, ಕೈಗಾರಿಕೆ ಸಂಸ್ಥೆಗಳಲ್ಲಿ ದುಡಿಯ ಬೇಕೆಂದು ನೀನು ಹೇಳಿರಲಿಲ್ಲವೇ, ಶಾಮು" ಎಂದು ರಾಮುವು ಪ್ರಶ್ನಿಸಿದ. ಶಾಮುನು ಹೌದೆಂದು ಒಪ್ಪಬೇಕಾಯ್ತು. "ಹಾಗಾದರೆ, ಮದುವೆಯಾದ ನಂತರ ನೀನೇ ಆ ಕೆಲಸ ಮಾಡಬಹುದಲ್ಲಾ. ಇದರಲ್ಲಿ ಯಾವ ಸಂಕೋ ಚಕ್ಕೂ ಕಾರಣವಿಲ್ಲ. ನಿನ್ನ ಬುದ್ಧಿಯಿಂದ ನೀನು ದುಡಿದುಕೊಂಡು, ಇತರ ರಿಗೂ ಉಪಕಾರವಾಡಿದಂತಾಗುತ್ತದೆ" ಎಂದು ರಾಮುವು ಹೇಳಿದ ಮಾತನ್ನು ಕಿಟ್ಟು ಮತ್ತು ತಮ್ಮಯ್ಯನವರು ಸರಿಯೆಂದರು. ತಮ್ಮ ವಾಣಿಜ್ಯ ಸಂಸ್ಥೆಗಳು ಯಾವ ಸ್ಥಿತಿಗೆ ಬಂದಿವೆ ಎಂಬುದನ್ನು ತಮ್ಮಯ್ಯನವರು ವಿಶದವಾಗಿ ತಿಳಿಸಿ ದರು. "ಈ ವಿಷಯದಲ್ಲಿ ಕಮಲಳ ಅಭಿಪ್ರಾಯವನ್ನು ತೆಗೆದುಕೊಳ್ಳಬೇಕು" ಎಂದು ಶಾಮುನು ನಗುತ್ತಾ ತಿಳಿಸಿದ. "ಅಭಿಪ್ರಾಯ ತೆಗೆದುಕೊಳ್ಳದೆ ಹಿಂದೆ ಪೆಟ್ಟು ತಿಂದಿದ್ದೇನೆ. ಆದ್ದರಿಂದ ಅವಳಿಷ್ಟದಂತೆಯೇ ನಡೆಯುವುದು" ತಮ್ಮಯ್ಯ ನವರು ಉತ್ತರ ಹೇಳಿ ಮುಗಿಸುವುದರೊಳಗೆ, ಒಳಗಿನಿಂದ ಕಿಟ್ಟುವಿನ ಹೆಂಡತಿ "ಕಮಲಳೂ ಒಪ್ಪಿದ್ದಾಳೆ" ಎಂದು ಮಾತಾಡಿದಳು. ಬಹಳ ಹೊತ್ತು ಯೋಚನೆಮಾಡಿ, ಒಳ್ಳೆ ಸಂದಿಗ್ಧಕ್ಕೆ ಸಿಕ್ಕಿದೆನೆಂದು ಭಾವಿಸಿ, ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತಿರುವುದನ್ನು ಕಂಡು, ಕಿಟ್ಟುವು "ಇಷ್ಟು ತಿಳಿದವನು ನೀನು, ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡಬೇಕೆನ್ನು ವುದು ಗೊತ್ತಿಲ್ಲವೇ" ಎಂದು ಟೀಕಿಸಿದ. ಕೊನೆಗೆ ಶಾಮುನು ತಮ್ಮಯ್ಯನವರ

ಮಾತಿಗೆ ಒಪ್ಪಲೇಬೇಕಾಯಿತು. ಊರಿಗೆ ಹಿಂದಿರುಗಿದನಂತರ ಲಗ್ನದ ಏರ್ಪಾಡಿನ ಬಗ್ಗೆ ಕಾಗದ ಬರೆಯುವುದಾಗಿ ತಿಳಿಸಿ, ತಮ್ಮಯ್ಯನವರ, ಬಂದಿದ್ದ ಕೆಲಸವು ಯಶಸ್ವಿಯಾಗಿ ಕೊನೆಗೊಂಡುದನಂತರ ಅತ್ಯಂತ ಸಂತೋಷ ಪಟ್ಟು ಮಾರನೆಯ ದಿನ ಬೆಳಗ್ಗೆಯೇ ಮಂಗಳೂರಿಗೆ ಕಮಲಳನ್ನು ಕರೆದು ಕೊಂಡು ಪ್ರಯಾಣ ಮಾಡಿದರು. ಕಿಟ್ಟು ಮತ್ತು ರಾಮುವಿಗೂ ಅತ್ಯಂತ ಸಂತಸವಾಯಿತು. "ಹಸೆಮೇಲೆ ನೀವಿಬ್ಬರೇ ಕುಳಿತುಕೊಳ್ಳಬೇಕು. ನಾನು ಪರದೇಶಿ. ಬಂಧು ಬಳಗ ಯಾರೂ ಇಲ್ಲ. ಎಲ್ಲಾ ಸ್ನೇಹಿತರೇ" ಎಂದು ಕಿಟ್ಟುವನ್ನುದ್ದೇಶಿಸಿ ಶಾಮನು ಹೇಳಿದ. ಕಿಟ್ಟುವಿಗೂ ಒಪ್ಪಿತೆಂದು ಹೇಳಬೇಕಾಗಿಲ್ಲ. ತಮ್ಮಯ್ಯನವರು ಮನೆಗೆ ಬಂದಮೇಲೆ ಕಾಲವಿಳಂಬ ಮಾಡದೆ, ಜೋಯಿಸರನ್ನು ಕರೆಯಿಸಿ, ಲಗ್ನದ ನಿಶ್ಚಯವನ್ನು ಮಾಡಿಸಿದರು. ಸೀತಮ್ಮನವರು ಯಾವ ಮಾತಿಗೂ ಪ್ರವೇಶಿಸುವಂತಿರಲಿಲ್ಲ. ರಘುವಿನ ದುರ್ದೆಶೆಯಿಂದಲೂ, ಅದರಮೇಲೆ ಇವರಿಗುಂಟಾದ ಪೆಟ್ಟಿನಿಂದಲೂ, ಮನೆಯಲ್ಲಿ ಮಾತೇ ನಡೆಯುವಂತಿರಲಿಲ್ಲ. ಲಗ್ನದ ನಿಶ್ಚಯವಾದರೂ ವರ ಯಾರು, ಎಲ್ಲಿ ಮದುವೆ ಎಂಬ ಒಂದು ಪ್ರಶ್ನೆಯನ್ನು ಅವರು ಕೇಳಲಿಲ್ಲ. ಯಂತ್ರದಂತೆ ತಾರಾಡುವುದೊಂದೇ ಅವರ ಕೆಲಸವಾಗಿತ್ತು. ಲಗ್ನಪತ್ರಿಕೆಗಳ ಮುದ್ರಣವೂ ಮುಗಿದು ತಮ್ಮಯ್ಯನವರಿಂದ ಕೆಲವು ಪ್ರತಿಗಳು ರಾಮುವಿಗೆ ಕಳುಹಿಸಲ್ಪಟ್ಟವು. ಶಾಮನಿಗೆ ಕಮಲಳನ್ನು ಕೊಟ್ಟು ಮದುವೆ ಎಂಬ ಸುದ್ದಿ ಮಂಗಳೂರಿನಲ್ಲೆಲ್ಲಾ ಹರಡಿದ ಮೇಲೆ ಅವನಿಗೆ ಪರಿಚಿತರಾಯಿದ್ದವರೆಲ್ಲಾ ಸಂತಸಪಟ್ಟರು. ತಮ್ಮಯ್ಯನವರ ಬಳಿ ಕೆಲಸಕ್ಕಿದ್ದ ಮತ್ತು ಸಂಪು ಹೂಡಿದ್ದ ಕೂಲಿಯವರಿಗೂ ಯಾವುದೋ ಒಂದು ರೀತಿಯ ಜ್ಞಾಪಕವು ಬಂದು ಶಾಮನ ಹೆಸರಿನಿಂದ ಆನಂದವಾಯಿತು. ಎರಡು ಕಡೆಯ ಖರ್ಚನ್ನೂ ತಮ್ಮಯ್ಯನವರೇ ವಹಿಸಿದ್ದರೆಂದು ಹೇಳಬೇಕಾದ ಅವಶ್ಯಕವಿಲ್ಲ. ಆದರೆ ಗಂಡಿನ ಕಡೆ ಯಜಮಾನಿಕೆಯನ್ನೆಲ್ಲಾ ಶ್ರೀಕಂಠಯ್ಯನವರಿಗೆ ಶಾಮನು ವಿಾಸಲಾಗಿಟ್ಟಿದ್ದ ಮದುವೆಗೆ ನಾಲ್ಕು ದಿನಗಳ ಮುಂಚೆಯೇ ಶ್ರೀಕಂಠಯ್ಯನವರು ಮದರಾಸಿಗೆ ಬಂದು ಶಾಮನನ್ನು ಸೇರಿದರು. ಅಲ್ಲಿಂದ ಕಿಟ್ಟುವಿನ ಸಂಸಾರ, ರಾಮು ಮತ್ತು ಶ್ರೀಕಂಠಯ್ಯ ಶಾಮನೊಂದಿಗೆ ಮಂಗಳೂರಿನ ಕಡೆ ಪ್ರಯಾಣ ಬೆಳೆಸಿದರು.

ಗಂಡಿನ ಪರವಾಗಿ ಬಂದಿದ್ದ ಜನರು ಸ್ವಲ್ಪವೇ ಆದರೂ, ತಮ್ಮಯ್ಯನವರ ಮಿತ್ರರೂ ಪರಿಚಿತರೂ ಅನೇಕ ಜನ ನೆರೆದಿದ್ದರು. ಶಾಮು ಮತ್ತು ಅವನ ಕಡೆಯ ಜನರಿಗೆ ಪ್ರತ್ಯೇಕವಾದ ಬಂಗಲೆಯೊಂದು ಮೀಸಲಾಗಿತ್ತು. ಮದುವೆಯ ಏರ್ಪಾಡು ತಮ್ಮಯ್ಯನವರ ಸ್ವಂತ ಬಂಗಲೆಯಲ್ಲೇ ಎಂದು ತೀರ್ಮಾನವಾಗಿತ್ತು. ಬಹಳ ದಿನಗಳ ಹಿಂದೆ ತಾನು ವಾಸವಾಗಿದ್ದು, ಉಪ್ಪು ತಿಂದಿದ್ದ ಮನೆಗೆ ಪುನಃ ಹೋಗುವ ವಿಷಯವು ಶಾಮುನಿಗೆ ಸಂತೋಷವುಂಟುಮಾಡಿತ್ತು.

ಗಂಡಿನ ಕಡೆಯವರನ್ನು ಆದರ ವಿಶ್ವಾಸಗಳಿಂದ ತಮ್ಮಯ್ಯನವರು ಎದುಗೊಂಡು, ಯಾವ ಕೊರತೆಯೂ ಇಲ್ಲದಂತೆ ಎಲ್ಲವನ್ನು ಅಣಿಮಾಡಿದರು. ಮಂಗಳೂರಿಗೆ ಬಂದ ಸಂಜೆಯೇ ಶ್ರೀಕಂಠಯ್ಯನವರು ತಮ್ಮಯ್ಯನವರ ಜತೆಯಲ್ಲಿ ಮಾತಾಡಿಕೊಂಡು ಅವರ ಬಂಗಲೆಗೆ ಹೋದರು. ಕಾಫಿ, ತಿಂಡಿ ಆದಮೇಲೆ ಆ ಮಾತು ಈ ಮಾತು ಆಡುತ್ತಾ, ಅಕಸ್ಮಾತ್ತಾಗಿ ತಲೆ ಎತ್ತಿ ನೋಡಿ ಶ್ರೀಕಂಠಯ್ಯನವರು ಆಶ್ಚರ್ಯದಿಂದ ಅಲ್ಲಿದ್ದ ಒಂದು ಫೋಟೋದ ಮೇಲೆ ನಟ್ಟ ದೃಷ್ಟಿಯನ್ನಿಟ್ಟರು. ಅಷ್ಟುಹೊತ್ತಿಗೆ ರಾಮುವು ಶಾಮುನನ್ನೂ, ಕಿಟ್ಟುವನ್ನೂ ಕರೆದುಕೊಂಡು ಮನೆಯೊಳಗೆ ಬಂದ. "ಏನು ಹಾಗೆ ನೋಡ್ತೀರಿ ಶ್ರೀಕಂಠಯ್ಯನವರೇ" ತಮ್ಮಯ್ಯನವರು ಪ್ರಶ್ನಿಸಿದರು. ಹೌದೋ ಅಲ್ಲವೋ ಎಂದು ಅನುಮಾನಪಡುತ್ತಾ ಶ್ರೀಕಂಠಯ್ಯನವರು, "ಅದು ಮಾರನಹಳ್ಳಿ ಜಹಗೀರದಾರರಾದ ಕೃಷ್ಣಮೂರ್ತಿಯವರ ಹೆಂಡತಿ ಅಣ್ಣ ನಾಗೇಶಭಟ್ಟರ ಚಿತ್ರವಲ್ಲವೇ" ಎಂಬುದಾಗಿ ಪ್ರಶ್ನಿಸಿದರು. "ಹೌದು, ಅವರೇ ನನ್ನ ತಂದೆ, ಕೃಷ್ಣಮೂರ್ತಿಯವರಿಗೆ ನಾನು ದತ್ತು ಮಗ." ತಮ್ಮಯ್ಯನವರ ಬಾಯಿಂದ ಮಾತು ಹೊರಬೀಳುವುದರೊಳಗೆ "ಚೆನ್ನಾಯ್ತು" ಎಂಬ ಉದ್ಗಾರವನ್ನು ಶ್ರೀಕಂಠಯ್ಯನವರು ಹೊರಹೊಮ್ಮಿದರು. "ಯಾಕೆ, ನಿಮಗೆ ಹ್ಯಾಗೆ ಅವರು ಪರಿಚಯ" ಕುತೂಹಲದಿಂದ ತಮ್ಮಯ್ಯನವರು ಕೇಳಿದರು. ರಾಮು, ಶಾಮು, ಕಿಟ್ಟು ಎಲ್ಲರೂ ಆಶ್ಚರ್ಯದಿಂದ ಮಾತಾಡದೆ ಕುಳಿತಿದ್ದರು. ಕಮಲಳೂ ಬಾಗಿಲಿನ ಬಳಿಯಲ್ಲೇ ನಿಂತಿದ್ದಳು.

"ನನಗೆ ಗೊತ್ತೇ ಇರಲಿಲ್ಲ. ನಮ್ಮ ಶಾಮು ಇಲ್ಲಿ ಸಂಬಂಧ ಮಾಡುತ್ತಾನೆಂದು" ಪುನಃ ಶ್ರೀಕಂಠಯ್ಯನವರು ಆಶ್ಚರ್ಯವನ್ನು ವ್ಯಕ್ತಪಡಿಸುತ್ತಲೂ, ತಮ್ಮಯ್ಯನವರಿಗೆ ಏನೂ ತೋಚದೆ, "ಹಾಗಂದ್ರೆ, ಏನು ಶ್ರೀಕಂಠಯ್ಯನವರೇ"

ಏನಾಯ್ತು ಈಗ" ಎಂದರು. "ಏನೂ ಇಲ್ಲ. ನಮ್ಮ ಶಾಮು ಕೃಷ್ಣಮೂರ್ತಿ ಯವರ ಮಗಳ ಮಗ" ಎಂದು ಹೇಳುತ್ತಲೂ, ಅಲ್ಲಿದ್ದವರಿಗೆಲ್ಲಾ ಹೇಳಲಾರದ ಒಂದು ರೀತಿಯ ಆಶ್ಚರ್ಯವೂ ಕುತೂಹಲವೂ ಆಯಿತು. "ನನಗೂ ಗೊತ್ತೇ ಇರಲಿಲ್ಲ. ಅಂತೂ ದೇವರ ಲೀಲೆ ಹೇಳಲು ಸಾಧ್ಯವಿಲ್ಲ. ತುಂಬಾ ಸಂತೋಷ, ಸಂತೋಷ" ತಮ್ಮಯ್ಯನವರು ತಮಗಾದ ಆನಂದವನ್ನು ಮಾತಿನಲ್ಲಿ ಹೇಳಿ ತೋರಿಸಲು ಪ್ರಯತ್ನಪಟ್ಟರು. ಶಾಮುನಿಗೂ ತಾನು ತಮ್ಮಯ್ಯನವರ ಬಂಧು ವೆಂದು ತಿಳಿದಮೇಲೆ ಮನಸ್ಸಿಗೆ ಬಹಳ ಸಮಾಧಾನವಾಯಿತು. ರಾತ್ರಿ ಹಾಸಿಗೆಯ ಮೇಲೆ ಕುಳಿತಿರುವಾಗ. ಶ್ರೀಕಂಠಯ್ಯನವರನ್ನು ತಾನು ಮತ್ತು ತನ್ನ ತಂದೆ ತಾಯಿ, ಕೃಷ್ಣಮೂರ್ತಿಯವರ ಮನೆಯುವರಾದರೂ, ಅಷ್ಟು ಬಡತನದಲ್ಲಿರಲು ಕಾರಣವೇನು ಎಂದು ಪ್ರಶ್ನಿಸಿದ. ಶ್ರೀಕಂಠಯ್ಯನವರು ಪಾರ್ವತಮ್ಮ ಮತ್ತು ರಾಮಶೇಷುವಿನ ಚರಿತ್ರೆಯನ್ನೆಲ್ಲಾ ವಿಶದವಾಗಿ ಹೇಳಿ, ಅವರ ಅಧೋಗತಿಗೆ ನಾಗೇಶಭಟ್ಟರೇ ಮೂಲಕಾರಣವೆಂದು ಹೇಳಿದರು. ಈ ಮಾತನ್ನು ಕೇಳಿದಮೇಲೆ ಶಾಮುನ ಮನಸ್ಸು ಬಹಳವಾಗಿ ನೊಂದಿತು. ಅಂತಹ ನಾಗೇಶಭಟ್ಟರ ಮಗನೊಂದಿಗೆ ತಾನು ಬಾಂಧವ್ಯ ಬೆಳೆಸುವುದು ಉಚಿತವೇ ಎಂದು ಸಹಾ ಯೋಚಿಸಿದ. ಆದರೆ ತಮ್ಮಯ್ಯನವರನ್ನು, ಕಮಲ ಳನ್ನು ಮೊದಲಿನಿಂದಲೂ ನೋಡಿದ್ದುದರಿಂದ ಇವರು ನಾಗೇಶಭಟ್ಟರ ಗುಣ ಗಳನ್ನು ಪಡೆದಿಲ್ಲವೆಂದು ನಿರ್ಧಾರವಾಯಿತು. ಮಾರನೆಯ ದಿನವೇ ಲಗ್ನವು ನಿಶ್ಚಯಿಸಲ್ಪಟ್ಟದ್ದರಿಂದ ಬೆಳಗಾದೊಡನೆ ಮಂಗಳಕಾರ್ಯಗಳು ಪ್ರಾರಂಭ ವಾಯಿತು.

ಶಾಮುನ ಮುಖದಲ್ಲಿ ನಗುವಾಗಲೀ ಗೆಲುವಾಗಲೀ ಇರಲಿಲ್ಲ ಕಮಲ ಮತ್ತು ರಾಮುವಿಗೆ ಮಾತ್ರ ಅಧಿಕ ಸಂತೃಪ್ತಿಯಾಗಿತ್ತು. "ಕೇವಲ ಗುಮಾಸ್ತೆ, ದೊಡ್ಡ ವಂಶದವನಲ್ಲಾ" ಎಂದು ಭಾವಿಸಿದ್ದ ಶಾಮನು ತಮ್ಮ ಹತ್ತಿರದ ನಂಟನೆಂದು ತಿಳಿದಮೇಲಂತೂ ಅವರಿಬ್ಬರ ಸಂತಸಕ್ಕೆ ಮೇರೆಯೇ ಇರಲಿಲ್ಲ ಯಥಾವಿಧಿಯಾಗಿ ಲಗ್ನವು ನಾಲ್ಕು ದಿನಗಳು ವಿಜೃಂಭಣೆಯಿಂದ ನಡೆಯಿತು. ತಮ್ಮಯ್ಯನವರು ಹಿಂದು ಮುಂದು ನೋಡದೆ ಹಣವನ್ನು ನೀರಿ ನಂತೆ ಚೆಲ್ಲಿ, ಬಂದಿದ್ದವರೆಲ್ಲಾ ಕೊಂಡಾಡುವಂತೆ ಲಗ್ನವನ್ನು ಮಾಡಿದರು.

ಐದನೆಯ ದಿನವೇ ಶ್ರೀಕಂಠಯ್ಯನವರು ಹಿಂದಿರುಗಬೇಕಾಗಿತ್ತು.

ಔತಣದ ಊಟವಾದನಂತರ ತಮ್ಮಯ್ಯನವರು ಶ್ರೀಕಂಠಯ್ಯನವರನ್ನೂ, ಶಾಮನನ್ನೂ ಕರೆಸಿಕೊಂಡು "ನನ್ನ ತಂದೆ ಪಾರ್ವತಮ್ಮ ಮತ್ತು ರಾಮಶೇಷು ವಿಗೆ ಬಹಳ ಅನ್ಯಾಯ ಮಾಡಿದರು. ಈ ವಿಷಯವನ್ನು ನಾನೇ ನನ್ನ ತಂದೆಗೆ ಅನೇಕ ವೇಳೆ ತಿಳಿಸಿದ್ದೆ. ಅದಕ್ಕಿಂತಲೂ ಹೆಚ್ಚಾಗಿ ನಾನೇನೂ ಆಗ ಮಾಡು ವಂತಿರಲಿಲ್ಲ. ನಂತರ ರಾಮಶೇಷು ತನ್ನ ಹೆಂಡತಿಯೊಂದಿಗೆ ಊರು ಬಿಟ್ಟು ಹೋದನೆಂದು ಮಾತ್ರ ಕೇಳಿದೆನೇ ವಿನಹ, ಎಲ್ಲಿಗೆ ಹೋದ, ಏನು ಮಾಡಿದ ನೆಂಬುದು ನನಗೆ ತಿಳಿಯಲಿಲ್ಲ. ಮಾರನಹಳ್ಳಿಗೆ ನಾನು ಹೋದಾಗಲೆಲ್ಲಾ ಅವರಿಬ್ಬರ ನೆನಪು ತಪ್ಪದೇ ನನಗೆ ಬರುತ್ತಿತ್ತು. ದೈವಸಹಾಯದಿಂದ ಅವರ ಮಗನೇ ನನಗೆ ಅಳಿಯನಾಗಿದ್ದಾನೆ. ಪಾರ್ವತಮ್ಮ, ರಾಮಶೇಷುವಿನಲ್ಲಿದ್ದ ಗುಣಗಳೆಲ್ಲಾ ಶಾಮನಲ್ಲಿ ಪುನರುಜ್ಜೀವಿತವಾಗಿದೆ ಎನ್ನುವುದು ನನಗೆ ಅನುಭವವಾಗಿದೆ. ಅಂದು ನನ್ನ ತಂದೆ ಮಾಡಿದ ತಪ್ಪನ್ನು ಈ ದಿನ ನಾನು ಸರಿಪಡಿಸದಿದ್ದರೆ ನನ್ನ ಮನಸ್ಸು ಒಪ್ಪುವುದಿಲ್ಲ. ಆದ್ದರಿಂದ ಪಾರ್ವತಮ್ಮ, ರಾಮಶೇಷುವಿನ ಆಸ್ತಿಯಲ್ಲಾ ನನ್ನ ತಂದೆಗೆ ಅವು ಅನ್ಯಾಯವಾಗಿ ಬಂದ ಕಾರಣ, ನನ್ನ ಅಳಿಯನಿಗೆ ವಾಪಸ್ಸು ಕೊಡಬೇಕೆಂದಿದ್ದೇನೆ. ಇದು ಅವನಿಗೆ ನ್ಯಾಯವಾಗಿ ಸಲ್ಲಬೇಕಾದ್ದು, ಆದ್ದರಿಂದ ಕೊಡುತ್ತೇನೆಯೇ ವಿನಹ, ಅಳಿಯ ನೆಂಬ ಮಮತೆಯಿಂದಲ್ಲವೆಂದು ಶಾಮನು ಭಾವಿಸಬೇಕು. ಅಳಿಯನೆಂಬ ವಿಶ್ವಾಸದಿಂದ ನಾನು ಕೊಡುವುದು ಮಂಗಳೂರಿನಲ್ಲಿ ಒಂದು ಸಣ್ಣ ಬಂಗಲೆ ಮಾತ್ರ. ಇದಕ್ಕೆ ರಾಮುವು ಸಹಾ ಒಪ್ಪಿದ್ದಾನೆ" ಎಂದು ತಮ್ಮ ಅಭೀಷ್ಟ ವನ್ನು ತಿಳಿಸಿ, ಆ ದಿನವೇ ಪತ್ರ ಬರೆಯಿಸಿ ರಿಜಿಸ್ಟರು ಸಹಾ ಮಾಡಿಸಿ ಶಾಮನ ವಶಕ್ಕೆ ಒಪ್ಪಿಸಿದರು. ಶ್ರೀಕಂಠಯ್ಯನವರಿಗೂ ಯಥೋಚಿತವಾದ ಉಡುಗೊರೆ ಗಳು ಕೊಡಲ್ಪಟ್ಟವು. ಮದುವೆಯಲ್ಲಿ ವರನ ಕಡೆ ನಿಂತು ಕೆಲಸವನ್ನು ಸಾಂಗ ವಾಗಿ, ಸಂತೋಷದಿಂದ ಮುಗಿಸಿದ, ಕಿಟ್ಟು ಮತ್ತು ಆತನ ಹೆಂಡತಿಗೆ ತಕ್ಕ ಉಡುಗೊರೆ ಸಲ್ಲಿಸಲ್ಪಟ್ಟಿತು. ಸೀತಮ್ಮನವರು ಯಾವ ಮಾತನ್ನೂ ಆಡದೆ ಶುಭಕಾರ್ಯದಲ್ಲಿ ತಮ್ಮ ಪಾಲಿನ ಕೆಲಸವನ್ನು ಮಾಡಿದರು. ಶಾಮನೂ ಕಮಲಳೂ ನಮಸ್ಕರಿಸಿದರೂ, ಅವರ ಬಾಯಿಂದ ಒಂದು ಮಾತೂ ಹೊರಡಲಿಲ್ಲ.

ತನ್ನ ತಂದೆ ತಾಯಿ ದುರ್ದೆಶೆಯಲ್ಲಿದ್ದಾಗ, ಸಹಾಯ ಮಾಡಿದ ಶ್ರೀಕಂಠಯ್ಯನವರನ್ನು ಈ ವಯಸ್ಸಿನಲ್ಲಿ ಹಾಗೆಯೇ ಬಿಟ್ಟಿರುವುದು ಶಾಮುನಿಗೆ ಸರಿದೋರಲಿಲ್ಲ. ಹೆಂಡತಿಯಿಲ್ಲದೆ ಮಕ್ಕಳೊಂದಿಗೆ ಕಷ್ಟವನ್ನು ಅನುಭವಿಸು ತ್ತಿದ್ದ ಶ್ರೀಕಂಠಯ್ಯನವರಿಗೆ ಯಾವುದಾದರೂ ಸರಿಯಾದ ಪ್ರತ್ಯುಪಕಾರ ವನ್ನು ಮಾಡಲೇಬೇಕೆಂದು ಶಾಮುನು ನಿರ್ಧರಿಸಿ, ಅವರೆಲ್ಲರೂ ಬಂದು ತನ್ನ ಮನೆಯಲ್ಲೇ ಯಜಮಾನರಾಗಿರಬೇಕೆಂದು ಪ್ರಾರ್ಥಿಸಿದ ಶ್ರೀಕಂಠಯ್ಯನವರು ಎಷ್ಟು ಬೇಡವೆಂದರೂ ಶಾಮುನು ಒಪ್ಪಲಿಲ್ಲ. ಕೊನೆಗೂ ಶಾಮುನ ಇಷ್ಟವೇ ಗೆದ್ದಿತು. ಶ್ರೀಕಂಠಯ್ಯನವರು ತಮ್ಮ ಉಳಿದ ಕಾಲವನ್ನು ಶಾಮುನ ಮನೆ ಯಲ್ಲಿ ಕಳೆಯಲು ಒಪ್ಪಿದರು. ತಮ್ಮಯ್ಯನವರಿಗೂ ಈ ವಿಷಯದಲ್ಲಿ ಸಂತಸವೇ ಆಯಿತು.

೪

ರಾಮುವೇನೊ ಮದರಾಸಿನ ಕೆಲಸಕ್ಕೇ ಪುನಃ ಹೊರಡಬೇಕೆಂದು ಯೋಚಿಸಿದ. ತಮ್ಮಯ್ಯನವರಿಗೆ ಮನಸ್ಸಿರಲಿಲ್ಲ. ಇನ್ನುಮೇಲೆ ಎಲ್ಲಾ ಕೆಲಸಗಳನ್ನೂ ರಾಮುವೇ ನೋಡಿಕೊಳ್ಳಬೇಕೆಂದೂ, ತಮಗೆ ವಿರಾಮ ಕೊಡ ಬೇಕೆಂದೂ ಹೇಳಿದರು. ಶಾಮುನೂ ಸಹ ಅದೇ ಅಭಿಪ್ರಾಯದವನಾಗಿದ್ದ. ತಂದೆ ಮತ್ತು ಮಿತ್ರನ—ಭಾವನ—ಮಾತನ್ನು ಒಮ್ಮೆಲೇ ಮೀರಿ ನಡೆಯು ವುದು ಸೂಕ್ತವೆಂದು ರಾಮುವಿಗೆ ತೋರಲಿಲ್ಲ ಆದರೆ ತನ್ನ ತಂದೆಯ ವ್ಯಾಪಾರ, ಕೈಗಾರಿಕಾ ಸಂಸ್ಥೆಗಳು ಪುನರುಜ್ಜೀವಿತವಾಗಬೇಕಾದರೆ ಎಷ್ಟು ಕಷ್ಟ ವೆಂಬುದು ಅವನಿಗೆ ಗೊತ್ತಿತ್ತು. ಶಾಮುನಾದರೋ ಇದೇ ಸುಖವೆಂದೂ, ಕಷ್ಟ ವಿಲ್ಲವೆಂದೂ, ನಡೆಸಿದಂತೆ ಲಾಭದಾಯಕವಾದುದೆಂದೂ ರಾಮುವಿಗೆ ಪದೇ ಪದೇ ಹೇಳಿ ಕೊನೆಗೆ ರಾಮುವು ಸರ್ಕಾರಿ ನೌಕರಿಯನ್ನು ತ್ಯಜಿಸುವಂತೆ ಮಾಡಿದ. ತಮ್ಮಯ್ಯನವರ ಇಷ್ಟದಂತೆ ರಾಮು ಮತ್ತು ಶಾಮು ಇಬ್ಬರೂ ಪಾಲುದಾರರಹಾಗೆ ಕೆಲಸ ಮಾಡಬೇಕೆಂದು ನಿರ್ಧರವಾಯಿತು.

ಹಗಲಿರುಳೂ ವಿಶ್ರಾಂತಿಯಿಲ್ಲದೆ, ಕೂಲಿಯವರೊಂದಿಗೆ ಬೆರೆತು, ಅವರ ಕಷ್ಟ ಸುಖಗಳನ್ನು ವಿಚಾರಿಸಿ, ಸರಿಯಾದ ಪರಿಹಾರ ಮಾರ್ಗವನ್ನು ಹುಡು ಕಲು ರಾಮುನು ತುಂಬಾ ಪ್ರಯತ್ನಪಟ್ಟ. ಆದರೆ ಕೂಲಿಯವರೆಲ್ಲಾ ಸಂಘಮಾಡಿ

ಕೊಂಡು ಅವರ ಮುಂದಾಳು ಹೇಳಿದಂತೆ ಕೇಳಲು ಒಪ್ಪಿದ್ದರು. ಬಂಡವಾಳಗಾರರು ಸರಿಯಾದ ದಾರಿಗೆ ಬಾರದಿದ್ದಲ್ಲಿ ಕೆಲಸಕ್ಕೇ ಸಂಪು ಹೂಡಿ ಅವರನ್ನು ಬಗ್ಗಿಸುವುದೇ ಹಾದಿಯೆಂದು ಆ ಮುಂದಾಳು ಎಲ್ಲರಿಗೂ ಉಪದೇಶಿಸಿದ್ದ. ಸಂಪು ಹೂಡಿದರೆ ತಿನ್ನುವುದಕ್ಕೆ ಏನು ಮಾಡುವುದು ಎಂದು ಪ್ರಶ್ನಿಸಿದ ಒಬ್ಬೊಬ್ಬ ಕೂಲಿಯವರಿಗೆ ಆತನು ಚಂದಾ ಹಣದಿಂದ ಊಟದ ಏರ್ಪಾಡು ಮಾಡಲಾಗುವುದೆಂಬೂ ಭರವಸೆಯನ್ನಿತ್ತಿದ್ದ. ಆದರೆ ಕೂಲಿಕಾರರ ಸಂಘವು ಕೊಡುವ ಅಲ್ಪ ಹಣದಿಂದ ಎಷ್ಟು ಜನ ಜೀವಿಸಬಲ್ಲರು? ಇದನ್ನರಿತ ಶಾಮನು ಹಿಂದೆ ತಮ್ಮಯ್ಯನವರ ಬಳಿ ಕೆಲಸ ಮಾಡುತ್ತಿದ್ದವರನ್ನೆಲ್ಲಾ ಮನೆಗೆ ಕರೆಯಿಸಿ, ಅವರ ಕೊರತೆಯೇನು ಎಂದು ವಿಶ್ವಾಸದಿಂದ ಪ್ರಶ್ನಿಸುತ್ತಲು, ಅವರೆಲ್ಲರೂ ಏಕಕಂಠದಿಂದ ಸಂಬಳಗಳನ್ನು ಎರಡರಷ್ಟು ಮಾಡಿದರೆ ಮಾತ್ರ ಕೆಲಸಕ್ಕೆ ಬರುವುದಾಗಿ ತಿಳಿಸಿದರು ರಾಮುವನ್ನು ವಿಚಾರಿಸಿ, ಶಾಮನು ಕೂಲಿಗಾರರ ಮುಂದಾಳಿಗೆ ತಾನೊಂದು ಸಲಹೆಕೊಡುವುದಾಗಿ ಹೇಳಿ, "ಸುಮ್ಮನೆ ಎರಡರಷ್ಟು, ಮೂರರಷ್ಟು, ಕೊಡಬೇಕೆಂದರೆ ಹೇಗೆ ಸಾಧ್ಯ. ಅದಕ್ಕೂ ನ್ಯಾಯ ಬೇಡವೇ, ಧರ್ಮ ಬೇಡವೇ ಬಂಡವಾಳಗಾರರು ತಮ್ಮ ಹಣದಿಂದ ಕೂಲಿಯವರ ಜೀವನ ಮಾತ್ರ ನಡೆಸಲು ಬದ್ಧಕಂಕಣರಾಗಿದ್ದಾರೆಯೇ. ಅವರಿಗೂ ತಮ್ಮ ಹಣಕ್ಕೆ, ಬುದ್ಧಿಗೆ ತಕ್ಕ ಪ್ರತಿಫಲ ದೊರಕಬೇಡವೇ" ಎಂದು ವಿವರವಾದ ಪ್ರಶ್ನೆಗಳನ್ನು ಕೇಳಿದ ಆತನು ಶಾಮನ ಪ್ರಶ್ನೆಗಳಿಗೆಲ್ಲಾ ಒಪ್ಪಲೇಬೇಕಾಯಿತು. ಪರಿಸ್ಥಿತಿಯು ಅನುಕೂಲವಾಗುತ್ತಿದೆಯೆಂದು ಭಾವಿಸಿ, ಶಾಮನು ಪುನಃ ಕೂಲಿಯವರ ಸಭೆಯೊಂದನ್ನು ಕರೆದು "ಈಗ ಈ ಕಾರ್ಯಗಳೆಲ್ಲಾ ನನ್ನ ಮತ್ತು ರಾಮುವಿನ ಪಾಲಿಗೆ ಬಂದಿವೆ. ನಮಗೆ ಬಡವರ ಸುಖವೇ ಮುಖ್ಯ ಧ್ಯೇಯ—ಯಾಕೆಂದರೆ, ನಾನೂ ಒಬ್ಬ ಬಡವನೇ ಹೌದು. ಆದ್ದರಿಂದ ರಷ್ಯದ ಮಾರ್ಗವನ್ನು ಅನುಸರಿಸೋಣ. ಈ ಸಂಸ್ಥೆಗೆ ಹಾಕಿರುವ ಬಂಡವಾಳದಮೇಲೆ ಬೇರೆ ಯಾವುದಾದರೂ ಹವ್ಯಾಸದಿಂದ ಬರಬಹುದಾದ ಬಡ್ಡಿಯನ್ನು ತೆಗೆದಿಟ್ಟು, ಉಳಿದ ನಫೆಯಲ್ಲಿ ಯಾರ್ಯಾರು ಎಷ್ಟೆಷ್ಟು ಕೆಲಸ ಮಾಡುತ್ತಾರೋ ಅದಕ್ಕೆ ಸರಿಯಾದ ಪ್ರತಿಫಲವನ್ನು ಕೊಡೋಣ. ಆಗ ಬಂಡವಾಳ ಹಾಕಿದವರಿಗೆ ಮತ್ತು ಕೆಲಸ ಮಾಡಿದವರಿಗೆ ಇಬ್ಬರಿಗೂ ಲಾಭವುಂಟು, ಸುಖವುಂಟು, ಇದಕ್ಕೆ ಒಪ್ಪಿಗೆಯೇ" ಎಂದು ಪ್ರಶ್ನಿಸಿದ. ನಾಳೆ

ತಿಳಿಸುವುದಾಗಿ ಹೇಳಿ ಎಲ್ಲರೂ ಹಿಂದಿರುಗಿದರು. ಮೂರನೆಯ ದಿನ ಕೂಲಿಯವರು ಬಂದು ಸಂತೋಷದಿಂದ ಒಪ್ಪಿಕೊಂಡರು. ರಾಮು ಮತ್ತು ಶಾಮನ ಆಡಳಿತದಲ್ಲಿ ಪುನಃ ಕೆಲಸಗಳು ಪ್ರಾರಂಭವಾಯಿತು. ಪರಿಸ್ಥಿತಿ, ಪ್ರಪಂಚದ ಸ್ಥಿತಿ, ವಾತಾವರಣ, ಎಷ್ಟು ಕೆಟ್ಟಿದ್ದರೂ ಇವರಿಬ್ಬರ ಸಂಸ್ಥೆಗಳು ಶುಭ ಸೂಚನೆಯಿಂದ ನಡೆಯಲಾರಂಭಿಸಿದವು. ಕೆಲಸವು ಪ್ರಾರಂಭವಾದ ಕೇವಲ ಒಂದು ತಿಂಗಳಿನಲ್ಲೇ ಹಿಂದೆ ಬರುತ್ತಿದ್ದ ಲಾಭಕ್ಕಿಂತ ಒಂದೂವರೆಯಷ್ಟು ಕಂಡು ಬಂದಿತು. ಕೂಲಿಯವರೂ ಸಹ ಸುಮಾರು ಎರಡರಷ್ಟು ವೇತನಪಡೆದರು. ಇದಕ್ಕೆ ಕಾರಣ ಹೆಚ್ಚು ಸಂಪಾದಿಸಬೇಕೆಂದು ಕೂಲಿಯವರು ದುಡಿಯುವುದೇ ಎಂಬುದಾಗಿ ಶಾಮನು ರಾಮುವಿಗೆ ತಿಳಿಸಿದ. ಮೊದಲೆರಡು ತಿಂಗಳು ಬಹಳ ಕಷ್ಟವಾದ ಕೆಲಸವಾಗಿದ್ದರೂ ನಂತರ ಶಾಮನ ಮನಸ್ಸಿಗೆ ಸಮಾಧಾನವಾಗುವಂತೆ ಹಿಡಿದ ಕಾರ್ಯವು ಮುಂದುವರೆಯತೊಡಗಿತು.

ಉಷಾ ಪ್ರೆಸ್, ನೀಲಗಿರಿ ರೋಡ್, ಮೈಸೂರು

# ಉಷಾ ಸಾಹಿತ್ಯ ಮಾಲೆ, ಮೈಸೂರು

---

## ಬಿಡಿ ಮುತ್ತುಗಳು

| | | |
|---|---|---|
| ಮೂರಾಬಟ್ಟೆ* ಕಾದಂಬರಿ | ವಿ. ಎಂ. ಇನಾಂದಾರ | ೩ ೧೫ ೦ |
| ಅಗ್ನಿಕನ್ಯೆ (ಎರಡನೆಯ ಆವೃತ್ತಿ) | ಅ. ನ. ಕೃಷ್ಣರಾಯ | ಅಚ್ಚಿನಲ್ಲಿ |
| ಕಾರಂತರ ಕಾದಂಬರಿಗಳು | | |
| ವಿಮರ್ಶೆ ಗ್ರಂಥ (೧೮೦ ಪುಟಗಳು) | ಎಸ್. ಅನಂತನಾರಾಯಣ | ,, |
| ಉಷಾ ಸ್ವಪ್ನ | | |
| ಕವನಗಳ ಸಂಗ್ರಹ (೮೦ ಪುಟಗಳು) | ,, | ,, |
| ಮುತ್ತು ಹವಳ | | |
| ಪ್ರಬಂಧಗಳ ಸಂಗ್ರಹ | ಬೇರೆ ಬೇರೆ ಬರಹಗಾರರಿಂದ | ,, |

---

* ಮಾಲೆಯ ಚಂದಾದಾರರಿಗೆ ಈ ಕಾದಂಬರಿ ಕೇವಲ ಮೂರು ರೂಪಾಯಿಗೆ ದೊರೆಯುತ್ತದೆ. ಅಂಚೆ ವೆಚ್ಚ ಆರಾಣೆ ಪ್ರತ್ಯೇಕ.

ಬಿಡಿ ಮುತ್ತುಗಳು ಚಂದಾದಾರರಿಗೆ ಮುಕ್ಕಾಲು ಬೆಲೆಗೆ ದೊರೆಯುವುವು. ಅಂಚೆ ವೆಚ್ಚ ಪ್ರತ್ಯೇಕ.

# ಉಷಾ ಸಾಹಿತ್ಯ ಮಾಲೆ, ಮೈಸೂರು

---

## ಈ ವರೆಗೆ ಪ್ರಕಟವಾದ ಕಾದಂಬರಿಗಳು

| | | | | |
|---|---|---|---|---|
| ರಕ್ತತರ್ಪಣ | ತ. ರಾ. ಸು. | ೧ | ೮ | ೦ |
| ಪಯಣದ ಹಾದಿಯಲ್ಲಿ | ಎಸ್. ಅನಂತನಾರಾಯಣ | ೧ | ೧೨ | ೦ |
| ಕಣ್ಣೀರು | ಅ. ನ ಕೃಷ್ಣರಾಯ | ೧ | ೧೩ | ೦ |
| ಅಸ್ಥಿಪಂಜರ | ಆರ್ಶಿಕ ವೆಂಕಟೇಶ | ೪ | ೦ | ೦ |
| ನಾಲ್ಕನೆಯ ಮನೆ | ಎಂ. ನರೇಂದ್ರಬಾಬು | ೨ | ೦ | ೦ |
| ಕನಸಿನ ಮನೆ | ವಿ. ಎಂ. ಇನಾಂದಾರ | ೪ | ೦ | ೦ |
| ಶಂಖವಾದ್ಯ | ನಾ. ಕಸ್ತೂರಿ | ೧ | ೧೩ | ೦ |
| ತತ್ವಜೀವಿ | ಎನ್. ಸೂರಪ್ಪ | ೧ | ೧೩ | ೦ |

## ಅಚ್ಚಿನಲ್ಲಿ

| | |
|---|---|
| ಹೇಮಾವತಿ | ಗೋರೂರು ರಾಮಸ್ವಾಮಿ ಅಯ್ಯಂಗಾರ್ |

---

ಮಾಲೆಯ ಜೂನ್, ಆಗಸ್ಟ್ ಸಂಚಿಕೆ 'ಹೇಮಾವತಿ' ಜುಲೈ ಒಂದನೆಯ ವಾರದಲ್ಲಿ ಪ್ರಕಟವಾಗುವುದು.